| ಕ್ರ ಸಂ | ಜಿಲ್ಲೆ | ತಾಲ್ಲೂಕು | ಒಟ್ಟು ಪುಟಗಳು | ಒಟ್ಟು ಟೈಟಲ್ ಡೀಡ್ ನಂಬರು ಎಂಟ್ರಿಗಳು | ಒಟ್ಟು ರಿಜಿಸ್ಟರ್ ಶೀಟ್ಸ್ | ಕ್ವಿಟ್ ರೆಂಟ್ ವಹಿ ಯಾವ ವರ್ಷಕ್ಕೆ ಸಂಬಂಧಿಸಿದ್ದು |
|---|---|---|---|---|---|---|
| 48 | ಮೈಸೂರು | ಮೈಸೂರು | 1–159 | Form A - 93<br>Form B – 359<br>**Total - 452** | **1–162** | 24th Sep 1897 |
| 49 | ಮೈಸೂರು | ನಂಜನಗೂಡು | 1–219 | Form A - 235<br>Form B – 179<br>**Total - 414** | **1–125** | Jan 1904 |
| 50 | ಮೈಸೂರು | ಟಿ ನರಸೀಪುರ | 1–105<br>1–173 | Form A - 142<br>Form B – 371<br>**Total - 513** | **1–81** | 26th Feb 1904 |
| 51 | ಮೈಸೂರು | ಹುಣಸೂರು<br>(ಪಿರಿಯಾ ಪಟ್ಟಣ) | 1–213 | Form A - 72<br>Form B – 510<br>**Total - 582** | **1–313**<br>(ಈ ಪೈಕಿ ರಿಜಿಸ್ಟರ್ ಶೀಟ್ 126,127 ಲಭ್ಯವಿರುವುದಿಲ್ಲ)) | 25th June 1897 |
| 52 | ಮೈಸೂರು | ಹೆಚ್.ಡಿ. ಕೋಟೆ | 1–60 | Form A - 76<br>Form B – 178<br>**Total - 254** | – | 16th March 1897 |
| 53 | ಮೈಸೂರು | ಕೆ ಆರ್ ನಗರ<br>(ಯಡತೊರೆ) | 1–217 | Form A - 66<br>Form B – 475<br>**Total - 541** | **1–137** | 6th July 1897 |
| 54 | ಮೈಸೂರು | ಪಿರಿಯಾಪಟ್ಟಣ | – | - | **1–313**<br>(ಈ ಪೈಕಿ ರಿಜಿಸ್ಟರ್ ಶೀಟ್ 126,127 ಲಭ್ಯವಿರುವುದಿಲ್ಲ) | - |
| 55 | ಚಾಮರಾಜ ನಗರ | ಚಾಮರಾಜ ನಗರ | 1–125 | Form A - 106<br>Form B – 142<br>**Total - 248** | **1–80** | 20th August 1897 |
| 56 | ಚಾಮರಾಜ ನಗರ | ಗುಂಡ್ಲುಪೇಟೆ | 1–21 | Form A - 1<br>Form B – 57<br>**Total - 58** | **1–39** | 6th April 1897 |
| 57 | ಚಾಮರಾಜ ನಗರ | ಯಳಂದೂರು | 1–110 | 269<br>**Total - 269** | **1–41** | 16-01-45 |
| 58 | ಮಂಡ್ಯ | ಮಂಡ್ಯ | 1–471 | Form A - 62<br>Form B – 785<br>**Total - 847** | **1–232**<br>(ಈ ಪೈಕಿ ರಿಜಿಸ್ಟರ್ ಶೀಟ್ 48,156,194,210,211,222, 223 ಲಭ್ಯವಿರುವುದಿಲ್ಲ) | 17th Sep 1897 |
| 59 | ಮಂಡ್ಯ | ಮಳವಳ್ಳಿ | 1–129 | Form A - 74<br>Form B – 335<br>**Total - 409** | 1–205 | 12th March 1897 |
| 60 | ಮಂಡ್ಯ | ಶ್ರೀರಂಗಪಟ್ಟಣ | 1–233 | Form A - 51<br>Form B – 493<br>**Total - 544** | **1–175**<br>((ಈ ಪೈಕಿ ರಿಜಿಸ್ಟರ್ ಶೀಟ್ 7,130,157,163,172,175 ಲಭ್ಯವಿರುವುದಿಲ್ಲ) | 23rd July 1897 |
| 62 | ಮಂಡ್ಯ | ನಾಗಮಂಗಲ | 1–385 | Form A - 109<br>Form B – 715<br>**Total - 824** | **1–333**<br>(ಈ ಪೈಕಿ ರಿಜಿಸ್ಟರ್ ಶೀಟ್ 193 ಲಭ್ಯವಿರುವುದಿಲ್ಲ) | 30th March 1897 |

| ಕ್ರ ಸಂ | ಜಿಲ್ಲೆ | ತಾಲ್ಲೂಕು | ಒಟ್ಟು ಪುಟಗಳು | ಒಟ್ಟು ಟೈಟಲ್ ಡೀಡ್ ನಂಬರು ಎಂಟ್ರಿಗಳು | ಒಟ್ಟು ರಿಜಿಸ್ಟರ್ ಶೀಟ್ಸ್ | ಕ್ವಿಟ್ ರೆಂಟ್ ವಹಿ ಯಾವ ವರ್ಷಕ್ಕೆ ಸಂಬಂಧಿಸಿದ್ದು |
|---|---|---|---|---|---|---|
| 63 | ಹಾಸನ | ಹಾಸನ | 1–425 | Form A - 64<br>Form B – 807<br>**Total - 871** | **1–407**<br>(ಈ ಪೈಕಿ ರಿಜಿಸ್ಟರ್ ಶೀಟ್ 365 ಲಭ್ಯವಿರುವುದಿಲ್ಲ) | 18th & 19th June 1897 |
| 64 | ಹಾಸನ | ಅರಸೀಕೆರೆ | 1–185 | Form A - 11<br>Form B – 804<br>**Total - 815** | **1–166** | 22nd Dec 1896 |
| 65 | ಹಾಸನ | ಚನ್ನರಾಯ ಪಟ್ಟಣ | 1–413 | Form A - 8<br>Form B – 901<br>**Total - 909** | **1–362** | 8th June 1897 |
| 66 | ಹಾಸನ | ಹೊಳೆನರಸೀ ಪುರ | 1–103 | Form A - 37<br>Form B – 315<br>**Total - 352** | **1–184** | 3rd August 1897 |
| 67 | ಹಾಸನ | ಸಕಲೇಶಪುರ (ಮುಜರಾಬಾದ್) | 1–129 | Form A - 17<br>Form B – 267<br>**Total - 284** | **1–225**<br>(ಈ ಪೈಕಿ ರಿಜಿಸ್ಟರ್ ಶೀಟ್ 106,131 ಲಭ್ಯವಿರುವುದಿಲ್ಲ) | 15th June 1897 |
| 68 | ಹಾಸನ | ಬೇಲೂರು | 1–267 | Form A - 67<br>Form B – 618<br>**Total - 685** | **1–256**<br>(ಈ ಪೈಕಿ ರಿಜಿಸ್ಟರ್ ಶೀಟ್ 230,241,242 ಲಭ್ಯವಿರುವುದಿಲ್ಲ) | 27th April 1897 |
| 69 | ಹಾಸನ | ಅರಕಲಗೂಡು | 1–181 | Form A - 58<br>Form B – 428<br>**Total - 486** | **1–300** | ವಹಿಯಲ್ಲಿ ಮಾಹಿತಿ ಲಭ್ಯವಿಲ್ಲ |
| 70 | ಚಿಕ್ಕ ಮಗಳೂರು | ಚಿಕ್ಕ ಮಗಳೂರು | 1–357 | Form A - 45<br>Form B – 665<br>**Total - 710** | **1–208**<br>1–185 (ಈ ಪೈಕಿ ರಿಜಿಸ್ಟರ್ ಶೀಟ್ 14,166,167,168 ಲಭ್ಯವಿರುವುದಿಲ್ಲ) | 10th August 1897 |
| 71 | ಚಿಕ್ಕ ಮಗಳೂರು | ಮೂಡಿಗೆರೆ | 1–43 | Form A - 11<br>Form B – 96<br>**Total - 107** | **1–137** | 29th Sep 1896 |
| 72 | ಚಿಕ್ಕ ಮಗಳೂರು | ಶೃಂಗೇರಿ | – | - | **1–224** | - |
| 73 | ಚಿಕ್ಕ ಮಗಳೂರು | ಕೊಪ್ಪ | 1–145 | Form A - 2<br>Form B – 501<br>**Total - 503** | **1–200** | 2nd March 1897 |
| 74 | ಚಿಕ್ಕ ಮಗಳೂರು | ತರೀಕೆರೆ (ಲಕ್ಕವಳ್ಳಿ) | 1–105 | Form A - 11<br>Form B – 311<br>**Total - 322** | **1–279**<br>**1–116**<br>(ಲಕ್ಕವಳ್ಳಿ)<br>(ಈ ಪೈಕಿ ರಿಜಿಸ್ಟರ್ ಶೀಟ್ 70,74 ಲಭ್ಯವಿರುವುದಿಲ್ಲ) | 15th Jan 1897 |
| 75 | ಚಿಕ್ಕ ಮಗಳೂರು | ಕಡೂರು<br>ಬಾಣಾವರ | 1–121 | Form A - 3<br>Form B – 342<br>**Total - 345** | **1–60 (ಕಡೂರು)**<br>**1–164 (ಬಾಣಾವರ)**<br>(ಈ ಪೈಕಿ ರಿಜಿಸ್ಟರ್ ಶೀಟ್ 7, 40 ಲಭ್ಯವಿರುವುದಿಲ್ಲ) | 20th April 1897 |
| | | **ಒಟ್ಟು** | **23046** | **54363** | | |

**ಮಾಹಿತಿ ಹಕ್ಕು ಅಧಿನಿಯಮ 2005 ರ ಸೆಕ್ಷನ್ 4(1)ಬಿ(i) ರಂತೆ ಮಾಹಿತಿ**

1) **ಇಲಾಖೆಯ ರಚನೆ:–**

ಮಾಹಿತಿ ಹಕ್ಕು ಅಧಿನಿಯಮ 2005 (ಸೆಕ್ಷನ್ 4(1)

ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇಲಾಖೆಯ ರೇಖಾ ಚಿತ್ರ

(ಆಯುಕ್ತರ ಕಛೇರಿ)



## ಮಾಹಿತಿ ಹಕ್ಕು ಅಧಿನಿಯಮ–2005 [ಸೆಕ್ಷನ್ 4(1)]

**ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯ ರೇಖಾಚಿತ್ರ**

**ಆಯುಕ್ತರು**



2. **ಕಾರ್ಯಗಳು:–**

1. ಭೂಮಿಯನ್ನು ಅಳತೆ ಮಾಡಿ, ದಾಖಲೆಗಳನ್ನು ತಯಾರಿಸುವುದು ಹಾಗೂ ಅದನ್ನು ನಿರ್ವಹಿಸಿ, ಸಂರಕ್ಷಿಸುವುದು.
2. **ಭೂಮಾಪನ ಇಲಾಖೆಯಲ್ಲಿ ಅಳತೆ ಮಾಡಲ್ಪಡುವ ಪ್ರಕರಣಗಳು:–**
   - ಭೂಮಂಜೂರಿ ಪ್ರಕರಣಗಳು
   - ಭೂಪರಿವರ್ತನಾ ಪ್ರಕರಣಗಳು
   - ಭೂಸ್ವಾಧೀನ ಪ್ರಕರಣಗಳು
   - ಮ್ಯುಟೇಶನ್ ಪ್ರಕರಣಗಳು

     ಎ) ತತ್ಕಾಲ್ ಪೋಡಿ ಪ್ರಕರಣಗಳು

     ಬಿ) ಸಂಯೋಜಿತ ಮ್ಯುಟೇಶನ್ ಪೋಡಿ ಪ್ರಕರಣಗಳು

     ಸಿ) 11ಇ ನಕ್ಷೆಗಳ ತಯಾರಿಕೆ, ವಿಸ್ತರಣೆ ಹಾಗೂ ಮೋಜಿಣಿ ತಂತ್ರಾಂಶದ ಅಳವಡಿಕೆ
   - ಭೂಸುಧಾರಣಾ ಪ್ರಕರಣಗಳು
   - ಹದ್ದುಬಸ್ತು ಪ್ರಕರಣಗಳು
   - ಕೋರ್ಟ್ ಕಮಿಷನ್ ವಾರೆಂಟ್ ಪ್ರಕರಣಗಳು
   - ಕೋರ್ಟ್ ಪಾರ್ಟಿಷನ್ ಡಿಕ್ರಿ ಪ್ರಕರಣಗಳು
   - ತಿದ್ದುಪಡಿ ಪ್ರಕರಣಗಳು (ಮೋಜಿಣಿ ತಪ್ಪುಗಳ ಸರಿಪಡಿಸುವ ಬಗ್ಗೆ – ಕೆ.ಎಲ್.ಆರ್.ನಿಯಮ 36(2) ಕ್ಕೆ ಸಂಬಂದಿಸಿದಂತೆ)
   - ಸರ್ಕಾರಿ ಜಮೀನುಗಳ ಅಳತೆ ಕೆಲಸ
3. ಗ್ರಾಮ ನಕಾಶೆಗಳ ತಯಾರಿಸುವಿಕೆ ಹಾಗೂ ಹೊಸ ಸ.ನಂ.ಗಳ ಇಂಡೀಕರಣ.
4. ತಾಲ್ಲೂಕು, ಜಿಲ್ಲಾ ಮತ್ತು ರಾಜ್ಯ ನಕಾಶೆಗಳ ತಯಾರಿಕೆ ಮತ್ತು ಮಾರಾಟ.
5. ನಗರಾಸ್ತಿಗಳಿಗೆ ಸಂಬಂಧಿಸಿದಂತೆ ಅಳತೆ ಕೆಲಸ ಅದಕ್ಕೆ ಸಂಬಂಧಿಸಿದಂತೆ ದಾಖಲೆಗಳ ತಯಾರಿಕೆ, ನಿರ್ವಹಣೆ ಮತ್ತು ವಿಸ್ತೃತ ನಗರಮಾಪನ.
6. ಮರುಭೂಮಾಪನ, ಭೂದಾಖಲೆಗಳ ಸ್ಕ್ಯಾನಿಂಗ್, ಡಿಜಿಟೈಸೇಷನ್.

**3. ಕರ್ತವ್ಯಗಳು:–**

1. **ಆಯುಕ್ತರು / ನಿರ್ದೇಶಕರು:– (ಭಾ.ಆ.ಸೇ., ಶ್ರೇಣಿ)**
   - ಇಲಾಖಾ ಮುಖ್ಯಸ್ಥರಾಗಿರುತ್ತಾರೆ.
   - ಗ್ರೂಪ್ ಬಿ, ಸಿ ಮತ್ತು ಡಿ ವೃಂದದ ಹುದ್ದೆಗಳ ನೇಮಕಾತಿ / ಶಿಸ್ತು ಹಾಗೂ ವರ್ಗಾವಣಾ ಪ್ರಾಧಿಕಾರಿ.
   - ಇಲಾಖೆಯ ಅಧಿಕಾರಿ /ಸಿಬ್ಬಂದಿಗಳ ಹಾಗೂ ಅವರ ಕರ್ತವ್ಯ ನಿರ್ವಹಣೆಯ ನಿಯಂತ್ರಿಸುವಿಕೆ, ಮೇಲ್ವಿಚಾರಣೆ ಹಾಗೂ ಕಾಲಕಾಲಕ್ಕೆ ಸೂಕ್ತ ನಿರ್ದೇಶನಗಳನ್ನು ನೀಡಿ, ಇಲಾಖಾ ಕೆಲಸ ಕಾರ್ಯಗಳನ್ನು ಅನುಷ್ಠಾನಗೊಳಿಸುವ ಜವಾಬ್ದಾರಿ. ಪ್ರಾದೇಶಿಕ ಆಯುಕ್ತರು ಹಾಗೂ ಜಿಲ್ಲಾಧಿಕಾರಿಗಳ ನಡುವೆ ಸಮನ್ವಯಾಧಿಕಾರಿಯಾಗಿರುತ್ತಾರೆ.
   - ಇಲಾಖೆಯ ಸರ್ವಾಂಗೀಣ ಅಭಿವೃದ್ಧಿ ಹಾಗೂ ಪ್ರಮುಖ ಯೋಜನೆಗಳ ಅನುಷ್ಠಾನದ ಜವಾಬ್ದಾರಿ.
   - ಅಂತರರಾಜ್ಯ ಗಡಿ ನಿರ್ಧರಣೆ ಮತ್ತು ಪರಿಶೀಲನೆ.
   - ಕರ್ನಾಟಕ ಭೂಕಂದಾಯ ನಿಯಮಾವಳಿ 1966 ರ ನಿಯಮ 46 ಕೆ ಅಡಿಯಲ್ಲಿ ಪರವಾನಗಿ ಭೂಮಾಪಕರ ಪರವಾನಗಿಯನ್ನು ರದ್ದುಪಡಿಸುವ ಅಧಿಕಾರ.
2. **ಭೂದಾಖಲೆಗಳ ಜಂಟಿ ನಿರ್ದೇಶಕರು:– ( ಗ್ರೂಪ್ ಎ ಹಿರಿಯ ಶ್ರೇಣಿ –6 ಹುದ್ದೆಗಳು)**

   (1) ಭೂದಾಖಲೆಗಳ ಜಂಟಿ ನಿರ್ದೇಶಕರು (ತಾಂತ್ರಿಕ)

   (2) ಭೂದಾಖಲೆಗಳ ಜಂಟಿ ನಿರ್ದೇಶಕರು (ವಿಚಾರಣೆ ಮತ್ತು ತನಿಖೆ)

   (3) ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರಮಾಪನ, ದಕ್ಷಿಣ ವಲಯ, ಬೆಂಗಳೂರು

   (4) ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರಮಾಪನ, ಉತ್ತರ ವಲಯ, ಬೆಳಗಾವಿ

   (5) ಪ್ರಾಚಾರ್ಯರು, ಭೂಮಾಪನ ತರಬೇತಿ ಸಂಸ್ಥೆ, ಮೈಸೂರು

   (6) ಪ್ರಾಚಾರ್ಯರು, ಪ್ರಾದೇಶಿಕ ಭೂಮಾಪನ ತರಬೇತಿ ಸಂಸ್ಥೆ, ಗುಲ್ಬರ್ಗಾ

(1) **ಭೂದಾಖಲೆಗಳ ಜಂಟಿ ನಿರ್ದೇಶಕರು (ತಾಂತ್ರಿಕ):–**

- ಕೇಂದ್ರ ಕಛೇರಿಯಲ್ಲಿ ಇಲಾಖಾ ಮುಖ್ಯಸ್ಥರಿಗೆ ಕಾರ್ಯನಿರ್ವಾಹಕ ವಿಷಯಗಳ ನಿರ್ಣಯಗಳಲ್ಲಿ ನೆರವಾಗುವುದು.
- ಕೇಂದ್ರ ಕಛೇರಿಯಲ್ಲಿನ ಹಾಗೂ ಕೇಂದ್ರ ಕಛೇರಿಯ ಅಧೀನದಲ್ಲಿನ ರಾಜ್ಯದ ಎಲ್ಲಾ ಕಾರ್ಯನಿರ್ವಾಹಕ ಸಿಬ್ಬಂದಿಗಳ ಕಾರ್ಯನಿರ್ವಹಣೆಯ ನಿಯಂತ್ರಣ.

- ಕಾರ್ಯನಿರ್ವಾಹಕ ವಿಷಯಗಳಲ್ಲಿ ಸಂಬಂಧಿಸಿದಂತೆ ಕೇಂದ್ರಕಛೇರಿಯ ಅಧೀನದಲ್ಲಿನ ಕಛೇರಿಗಳಿಂದ ಸ್ವೀಕೃತವಾಗುವ ಎಲ್ಲಾ ಕಡತಗಳ ತಾಂತ್ರಿಕ ಅಭಿಪ್ರಾಯ ನೀಡುವುದು, ಸೂಕ್ತ ಸಲಹೆ ಮತ್ತು ಸೂಚನೆ ನೀಡುವುದು.
- ಇಲಾಖೆಯ ಪ್ರಗತಿ ಪರಿಶೀಲನೆ ಮತ್ತು ಪುನರಾವಲೋಕನ.
- ಇಲಾಖಾಧಿಕಾರಿಗಳ ದಿನಚರಿಗಳ ಸಮೀಕ್ಷೆ.
- ಕೇಂದ್ರಕಛೇರಿಯ ನಕಾಶೆ ವಿಭಾಗಕ್ಕೆ ಸಂಬಂಧಪಟ್ಟ ಕಾರ್ಯವನ್ನು ಪರಿಶೀಲಿಸುವುದು.
- ಇಲಾಖೆಯ ಯೋಜನೆಗಳ ಮೇಲುಸ್ತುವಾರಿ.

(2) **ಭೂದಾಖಲೆಗಳ ಜಂಟಿ ನಿರ್ದೇಶಕರು:– (ವಿಚಾರಣೆ ಮತ್ತು ತನಿಖೆ)**

- ಕೇಂದ್ರಕಛೇರಿಯಲ್ಲಿ ಇಲಾಖಾ ಮುಖ್ಯಸ್ಥರಿಗೆ ಕಾರ್ಯನಿರ್ವಾಹಕ ವಿಷಯಗಳ ನಿರ್ಣಯಗಳಲ್ಲಿ ನೆರವಾಗುವುದು.
- ಭೂಮಾಪನ ಇಲಾಖೆಯ ವಿಷಯಗಳಿಗೆ ಸಂಬಂಧಿಸಿದಂತೆ ತರಬೇತಿಯನ್ನು ಆಯೋಜಿಸುವುದು.
- ಇಲಾಖಾ ಶಿಸ್ತು / ದೂರು ಪ್ರಕರಣಗಳಲ್ಲಿ ವಿಚಾರಣೆ.
- ಇಲಾಖಾ ಅಧೀನ ಕಛೇರಿಗಳ ತಪಾಸಣೆ ಮಾಡಿ, ವರದಿ ತಯಾರಿಸುವುದು.
- ಪರವಾನಗಿ ಭೂಮಾಪಕರ ಯೋಜನೆಯ ಮೇಲ್ವಿಚಾರಣೆ.

(3) **ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರಮಾಪನ, ದಕ್ಷಿಣ ವಲಯ, ಬೆಂಗಳೂರು :–**

- ಬೆಂಗಳೂರು ಮತ್ತು ಮೈಸೂರು ಕಂದಾಯ ವಿಭಾಗದ ವ್ಯಾಪ್ತಿಯಲ್ಲಿನ ನಗರಮಾಪನ ಕಛೇರಿಗಳ ನಿಯಂತ್ರಣ ಮತ್ತು ಮೇಲುಸ್ತುವಾರಿ.
- ಕರ್ನಾಟಕ ಭೂಕಂದಾಯ ಅಧಿನಿಯಮ 1964 ರ ಕಲಂ 56 ರಡಿಯಲ್ಲಿ ನಗರಾಸ್ತಿಗಳಿಗೆ ಸಂಬಂಧಿಸಿದಂತೆ ರಿವಿಜನ್ ಪ್ರಕರಣಗಳನ್ನು ವಿಚಾರಣೆಯಿಂದ ಇತ್ಯರ್ಥಪಡಿಸುವಲ್ಲಿ ಮೇಲ್ಮನವಿ ಪ್ರಾಧಿಕಾರವಾಗಿರುತ್ತಾರೆ.
- ನಗರಾಸ್ತಿಗಳಿಗೆ ಸಂಬಂಧಪಟ್ಟಂತೆ ಗಡಿ ವಿವಾದಗಳನ್ನು ಕರ್ನಾಟಕ ಭೂಕಂದಾಯ ಅಧಿನಿಯಮ 1964 ರ ಕಲಂ 140 (2) ಅಡಿಯಲ್ಲಿ ಇತ್ಯರ್ಥಪಡಿಸುತ್ತಾರೆ.
- ಗ್ರೂಪ್ ಸಿ ವೃಂದದಲ್ಲಿನ ಪ್ರಥಮ ದರ್ಜೆ ಸಹಾಯಕ ಹಂತದ ಹಾಗೂ ಸಮನಾಂತರ ಹುದ್ದೆ ಗಳಿಗೆ ನೇಮಕಾತಿ ಹಾಗೂ ಶಿಸ್ತು ಪ್ರಾಧಿಕಾರಿಯಾಗಿರುತ್ತಾರೆ.

(4) **ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರಮಾಪನ, ಉತ್ತರ ವಲಯ, ಬೆಳಗಾವಿ:–**

- ಬೆಳಗಾಂ ಮತ್ತು ಗುಲ್ಬರ್ಗಾ ಕಂದಾಯ ವಿಭಾಗದ ವ್ಯಾಪ್ತಿಯಲ್ಲಿನ ನಗರಮಾಪನ ಕಛೇರಿಗಳ ನಿಯಂತ್ರಣ ಮತ್ತು ಮೇಲುಸ್ತುವಾರಿ.
- ಕರ್ನಾಟಕ ಭೂಕಂದಾಯ ಅಧಿನಿಯಮ 1964 ರ ಕಲಂ 56 ರಡಿಯಲ್ಲಿ ನಗರಾಸ್ತಿಗಳಿಗೆ ಸಂಬಂಧಿಸಿದಂತೆ ರಿವಿಜನ್ ಪ್ರಕರಣಗಳನ್ನು ವಿಚಾರಣೆಯಿಂದ ಇತ್ಯರ್ಥಪಡಿಸುವಲ್ಲಿ ಮೇಲ್ಮನವಿ ಪ್ರಾಧಿಕಾರವಾಗಿರುತ್ತಾರೆ.
- ನಗರಾಸ್ತಿಗಳಿಗೆ ಸಂಬಂಧಪಟ್ಟಂತೆ ಗಡಿ ವಿವಾದಗಳನ್ನು ಕರ್ನಾಟಕ ಭೂಕಂದಾಯ ಅಧಿನಿಯಮ 1964 ರ ಕಲಂ 140 (2) ಅಡಿಯಲ್ಲಿ ಇತ್ಯರ್ಥಪಡಿಸುತ್ತಾರೆ.
- ಗ್ರೂಪ್ ಸಿ ವೃಂದದಲ್ಲಿನ ಪ್ರಥಮ ದರ್ಜೆ ಸಹಾಯಕ ಹಂತದ ಹಾಗೂ ಸಮನಾಂತರ ಹುದ್ದೆ ಗಳಿಗೆ ನೇಮಕಾತಿ ಹಾಗೂ ಶಿಸ್ತು ಪ್ರಾಧಿಕಾರಿಯಾಗಿರುತ್ತಾರೆ.

(5) **ಪ್ರಾಚಾರ್ಯರು, ಭೂಮಾಪನ ತರಬೇತಿ ಸಂಸ್ಥೆ, ಮೈಸೂರು:–**

- ಭೂಮಾಪನ ಇಲಾಖೆಯಲ್ಲಿ ನೇಮಕಗೊಳ್ಳುವ ಕಾರ್ಯನಿರ್ವಾಹಕ ಸಿಬ್ಬಂದಿ (ಭೂದಾಖಲೆಗಳ ಸಹಾಯಕ ನಿರ್ದೇಶಕರು (ಕಾ.ನಿ) /ಅಧೀಕ್ಷಕರು (ಕಾ.ನಿ)/ ತಪಾಸಕರು / ಭೂಮಾಪಕರುಗಳಿಗೆ ವೃತ್ತಿ ಬುನಾದಿ ತರಬೇತಿ ನೀಡುವುದು.
- ಇಲಾಖಾ ಸೇವೆಯಲ್ಲಿರುವ ಅಧಿಕಾರಿ / ನೌಕರರುಗಳಿಗೆ ಪುನಶ್ಚೇತನ ತರಬೇತಿ.
- ಕಂದಾಯ ಇಲಾಖೆಯ ಅಧಿಕಾರಿ / ನೌಕರರುಗಳಿಗೆ ಇಲಾಖೆಯ ವಿಷಯಕ್ಕೆ ಸಂಬಂಧಿಸಿದಂತೆ ತರಬೇತಿ.
- ಐ.ಎ.ಎಸ್. ಮತ್ತು ಕೆ.ಎ.ಎಸ್. ಅಧಿಕಾರಿಗಳಿಗೆ ಇಲಾಖಾ ವಿಷಯಗಳಲ್ಲಿ ತರಬೇತಿ.

(6) **ಪ್ರಾಚಾರ್ಯರು, ಪ್ರಾದೇಶಿಕ ಭೂಮಾಪನ ತರಬೇತಿ ಸಂಸ್ಥೆ, ಗುಲ್ಬರ್ಗಾ:–**

- ಭೂಮಾಪನ ಇಲಾಖೆಯಲ್ಲಿ ನೇಮಕಗೊಳ್ಳುವ ಕಾರ್ಯನಿರ್ವಾಹಕ ಸಿಬ್ಬಂದಿ (ಭೂದಾಖಲೆ ಗಳ ಸಹಾಯಕ ನಿರ್ದೇಶಕರು (ಕಾ.ನಿ) /ಅಧೀಕ್ಷಕರು (ಕಾ.ನಿ)/ ತಪಾಸಕರು / ಭೂಮಾಪಕರುಗಳಿಗೆ ವೃತ್ತಿ ಬುನಾದಿ ತರಬೇತಿ ನೀಡುವುದು.
- ಇಲಾಖಾ ಸೇವೆಯಲ್ಲಿರುವ ಅಧಿಕಾರಿ / ನೌಕರರುಗಳಿಗೆ ಪುನಶ್ಚೇತನ ತರಬೇತಿ.
- ಕಂದಾಯ ಇಲಾಖೆಯ ಅಧಿಕಾರಿ / ನೌಕರರುಗಳಿಗೆ ಇಲಾಖೆಯ ವಿಷಯಕ್ಕೆ ಸಂಬಂಧಿಸಿದಂತೆ ತರಬೇತಿ.

3. **ಭೂದಾಖಲೆಗಳ ಉಪ ನಿರ್ದೇಶಕರು:– ( ಗ್ರೂಪ್ ಎ ಕಿರಿಯ ಶ್ರೇಣಿ –36 ಹುದ್ದೆಗಳು):–**

ಪ್ರತಿ ಜಿಲ್ಲೆಯ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ

(1) ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರು = 30

(2) ವಿಚಾರಣಾಧಿಕಾರಿಗಳು, ನಗರಮಾಪನ ತಂಡ–1,2 ಮತ್ತು 3 ಬೆಂಗಳೂರು = 3

(3) ಭೂದಾಖಲೆಗಳ ಉಪ ನಿರ್ದೇಶಕರು, ನಗರಮಾಪನ, ಬೆಂಗಳೂರು =1

(4) ಗ್ರೂಪ್ ಎ ಇನ್‌ಸ್ಪ್ರಕ್ಟರ್ (ತರಬೇತಿ ಸಂಸ್ಥೆ ಮೈಸೂರು/ಗುಲ್ಬರ್ಗಾ) =2

(1) **ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರು:– (30 ಹುದ್ದೆಗಳು)**

- ಭೂಮಾಪನ ವಿಷಯಗಳಲ್ಲಿ ಜಿಲ್ಲಾಧಿಕಾರಿಗಳಿಗೆ ತಾಂತ್ರಿಕ ಸಲಹೆಗಳನ್ನು ನೀಡುವುದು.
- ಸಂಬಂಧಪಟ್ಟ ಜಿಲ್ಲಾ ವ್ಯಾಪ್ತಿಯಲ್ಲಿನ ಭೂಮಾಪನ ಅಧಿಕಾರಿ ಹಾಗೂ ಸಿಬ್ಬಂದಿಯ ಕಾರ್ಯ ನಿರ್ವಹಣೆಯ ಮೇಲುಸ್ತುವಾರಿ.
- ಕರ್ನಾಟಕ ಭೂಕಂದಾಯ ಅಧಿನಿಯಮ 1964 ರ ಕಲಂ 49(ಎ)ಅಡಿಯಲ್ಲಿ 1ನೇ ಮೇಲ್ಮನವಿ ಪ್ರಕರಣಗಳನ್ನು ವಿಚಾರಣೆಯಿಂದ ಇತ್ಯರ್ಥಪಡಿಸುವುದು.
- ಕರ್ನಾಟಕ ಭೂಕಂದಾಯ ನಿಯಮಾವಳಿ 1966 ನಿಯಮ 36(1) ರಡಿಯಲ್ಲಿ ಮೋಜಣಿ ತಪ್ಪಿನ ಪ್ರಕರಣಗಳನ್ನು ಸರಿಪಡಿಸಿ, ತಿದ್ದುಪಡಿ ಆದೇಶ ಮಾಡುವುದು.
- ಕರ್ನಾಟಕ ಭೂಕಂದಾಯ ನಿಯಮಾವಳಿ 1966 ನಿಯಮ 36(2) ರಡಿಯಲ್ಲಿ ಪೋಡಿ ಪ್ರಕರಣಗಳ (ಮ್ಯುಟೇಶನ್ ಪ್ರಕರಣಗಳನ್ನು ಹೊರತುಪಡಿಸಿ) ಅಂತಿಮಗೊಳಿಸುವ ಬಗ್ಗೆ ಮೇಲು ಸಹಿ ಮಾಡುವುದು.
- ಕರ್ನಾಟಕ ಭೂಕಂದಾಯ ನಿಯಮಾವಳಿ 1966 ನಿಯಮ 139(2) ರಡಿಯಲ್ಲಿ ಹದ್ದುಬಸ್ತು ಮೇಲ್ಮನವಿ ಪ್ರಕರಣಗಳನ್ನು ಇತ್ಯರ್ಥಪಡಿಸುವುದು.
- ಪರವಾನಗಿ ಭೂಮಾಪಕರ ಪರವಾನಗಿ ನವೀಕರಿಸುವುದು ಮತ್ತು ಪರವಾನಗಿಯನ್ನು ಅಮಾನತ್ತಿನಲ್ಲಿರಿಸುವುದು.
- ಜಿಲ್ಲಾ ವ್ಯಾಪ್ತಿಯಲ್ಲಿನ ಭೂಮಾಪನ ಇಲಾಖೆಗೆ ಸಂಬಂಧಪಟ್ಟ ಎಲ್ಲಾ ಗ್ರೂಪ್ ಸಿ ಮತ್ತು ಡಿ ನೌಕರರುಗಳನ್ನು ಅಮಾನತ್ತಿನಲ್ಲಿರಿಸುವ ಅಧಿಕಾರ.
- ನಗರಮಾಪನ ಕಾರ್ಯ ಆರಂಭಿಸಿರುವ 5 ಜಿಲ್ಲೆಗಳಾದ ಮಂಗಳೂರು / ಶಿವಮೊಗ್ಗ / ಮೈಸೂರು / ಬಳ್ಳಾರಿ / ಧಾರವಾಡ ಗಳಲ್ಲಿ ಸಂಬಂಧಿತ ಭೂದಾಖಲೆಗಳ ಉಪ ನಿರ್ದೇಶಕರು ಈ ಕಾರ್ಯದ ಮೇಲುಸ್ತುವಾರಿ.
- ನಗರಮಾಪನ ನಿರ್ವಹಣೆ ಕಾರ್ಯ ಚಾಲ್ತಿಯಲ್ಲಿರುವ ಜಿಲ್ಲೆಗಳಲ್ಲಿ ಸಂಬಂಧಿತ ಭೂದಾಖಲೆ ಗಳ ಉಪ ನಿರ್ದೇಶಕರು ನಗರಮಾಪನ ಕಾರ್ಯಗಳನ್ನು ನಿರ್ವಹಿಸುತ್ತಾರೆ. (ಬೆಂಗಳೂರು ನಗರ ಜಿಲ್ಲೆ ಹೊರತುಪಡಿಸಿ)

(2) **ವಿಚಾರಣಾಧಿಕಾರಿಗಳು, ನಗರಮಾಪನ ತಂಡ–1,2 ಮತ್ತು 3 ಬೆಂಗಳೂರು :–**

- ವಿಚಾರಣಾಧಿಕಾರಿಗಳು ಸ್ವತಂತ್ರವಾಗಿ ಕಾರ್ಯ ನಿರ್ವಹಿಸುವ ಅಧಿಕಾರಿಯಾಗಿರುತ್ತಾರೆ.
- ವಿಚಾರಣಾಧಿಕಾರಿಗಳು, ನಗರಮಾಪನ ತಂಡ–1 ರ ವ್ಯಾಪ್ತಿಯಲ್ಲಿ ಪೀಣ್ಯ (ಸ್ಥಳೀಯ ಕ್ಷೇತ್ರ–1), ಮಹಾಲಕ್ಷ್ಮಿ ಲೇ ಔಟ್ (ಸ್ಥ.ಕ್ಷೇ.2), ಯಶವಂತಪುರ(ಸ್ಥ.ಕ್ಷೇ.3), ಮತ್ತೀಕೆರೆ (ಸ್ಥ.ಕ್ಷೇ.4), ಗೋಕುಲ (ಸ್ಥ.ಕ್ಷೇ.5),ಮಲ್ಲೇಶ್ವರಂ (ಸ್ಥ.ಕ್ಷೇ 6), ಸುಬ್ರಮಣ್ಯ ನಗರ (ಸ್ಥ.ಕ್ಷೇ.7), ರಾಜಾಜಿನಗರ 1ನೇ ಬ್ಲಾಕ್ (ಸ್ಥ.ಕ್ಷೇ.8), ರಾಜಾಜಿನಗರ 2ನೇ ಬ್ಲಾಕ್ (ಸ್ಥ.ಕ್ಷೇ.9), ರಾಜಾಜಿನಗರ 3ನೇ ಬ್ಲಾಕ್ (ಸ್ಥ.ಕ್ಷೇ.10), ರಾಜಾಜಿನಗರ 4ನೇ ಬ್ಲಾಕ್ (ಸ್ಥ.ಕ್ಷೇ.11), ರಾಜಾಜಿನಗರ 5ನೇ ಬ್ಲಾಕ್ (ಸ್ಥ.ಕ್ಷೇ.12), ರಾಜಾಜಿನಗರ 6ನೇ ಬ್ಲಾಕ್ (ಸ್ಥ.ಕ್ಷೇ.13), ವೆಸ್ಟ್ ಅಫ್ ಕಾರ್ಡ್ ರಸ್ತೆ (ಸ್ಥ.ಕ್ಷೇ.14), ವಿಜಯನಗರ (ಸ್ಥ.ಕ್ಷೇ.15), ಬಾಪೂಜಿನಗರ (ಸ್ಥ.ಕ್ಷೇ.16), ಗುಡ್ಡದಹಳ್ಳಿ (ಸ್ಥ.ಕ್ಷೇ.51), ಪಾದರಾಯನಪುರ (ಸ್ಥ.ಕ್ಷೇ.52), ಗೋರಿಪಾಳ್ಯ (ಸ್ಥ.ಕ್ಷೇ.53), ಕೆಂಪಾಪುರ ಅಗ್ರಹಾರ (ಸ್ಥ.ಕ್ಷೇ.55), ಗೋಪಾಲಪುರ (ಸ್ಥ.ಕ್ಷೇ.56), ರಾಮಚಂದ್ರಪುರ (ಸ್ಥ.ಕ್ಷೇ.57), ಪ್ರಕಾಶನಗರ (ಸ್ಥ.ಕ್ಷೇ.58), ಶ್ರೀರಾಮಪುರ (ಸ್ಥ.ಕ್ಷೇ.59) ಸ್ಥಳೀಯ ಕ್ಷೇತ್ರಗಳು ಬರುತ್ತವೆ.
- ವಿಚಾರಣಾಧಿಕಾರಿಗಳು, ನಗರಮಾಪನ ತಂಡ–2 ರ ವ್ಯಾಪ್ತಿಯಲ್ಲಿ ಆಂಜನಪ್ಪ ಗಾರ್ಡನ್ (ಸ್ಥ.ಕ್ಷೇ.54), ಸುಭಾಷ್‌ನಗರ (ಸ್ಥ.ಕ್ಷೇ.60), ಶೇಷಾದ್ರಿಪುರ (ಸ್ಥ.ಕ್ಷೇ.61), ರಾಜಮಹಲ್ ಗುಟ್ಟಹಳ್ಳಿ (ಸ್ಥ.ಕ್ಷೇ.62), ಗೆದ್ದಲಹಳ್ಳಿ (ಸ್ಥ.ಕ್ಷೇ.64), ಹೆಬ್ಬಾಳ (ಸ್ಥ.ಕ್ಷೇ.65), ಗಂಗೇನಹಳ್ಳಿ (ಸ್ಥ.ಕ್ಷೇ.66), ಮಠದಹಳ್ಳಿ (ಸ್ಥ.ಕ್ಷೇ.67), ಮುನಿರೆಡ್ಡಿಪಾಳ್ಯ (ಸ್ಥ.ಕ್ಷೇ.68), ಪಾಟರಿ ಟೌನ್ (ಸ್ಥ.ಕ್ಷೇ.69), ದೇವರಜೀವನಹಳ್ಳಿ (ಸ್ಥ.ಕ್ಷೇ.70), ಸದಾಶಿವನಗರ (ಸ್ಥ.ಕ್ಷೇ.63), ಸಗಾಯಿಪುರ (ಸ್ಥ.ಕ್ಷೇ.71), ಕೂಕ್ಸ್ ಟೌನ್ (ಸ್ಥ.ಕ್ಷೇ.72), ಲಿಂಗರಾಜಪುರ (ಸ್ಥ.ಕ್ಷೇ.73), ಮಾರುತಿಸೇವಾನಗರ (ಸ್ಥ.ಕ್ಷೇ.74), ಕಾಕ್ಸ್‌ಟೌನ್ (ಸ್ಥ.ಕ್ಷೇ.75), ಫ್ರೇಜರ್ ಟೌನ್ (ಸ್ಥ.ಕ್ಷೇ.76), ವಸಂತನಗರ (ಸ್ಥ.ಕ್ಷೇ.77), ಜಯಮಹಲ್ (ಸ್ಥ.ಕ್ಷೇ.78), ಕುಮಾರ ಪಾರ್ಕ್ (ಸ್ಥ.ಕ್ಷೇ.79), ಗಾಂಧೀನಗರ (ಸ್ಥ.ಕ್ಷೇ.80), ಚಿಕ್ಕಪೇಟೆ (ಸ್ಥ.ಕ್ಷೇ.81ಎ), ನಗರ್ತಪೇಟೆ (ಸ್ಥ.ಕ್ಷೇ.81ಬಿ), ಸಂಪಂಗಿರಾಮನಗರ (ಸ್ಥ.ಕ್ಷೇ.82), ಶಿವಾಜಿನಗರ (ಸ್ಥ.ಕ್ಷೇ.83), ಸುಲ್ತಾನಪೇಟೆ (ಸ್ಥ.ಕ್ಷೇ.84), ನೆಹರುಪುರ (ಸ್ಥ.ಕ್ಷೇ.85), ಭಾರತಿನಗರ (ಸ್ಥ.ಕ್ಷೇ.86), ಕಮರ್ಷಿಯಲ್ ಸ್ಟ್ರೀಟ್ (ಸ್ಥ.ಕ್ಷೇ.87), ಶಿವನಚೆಟ್ಟಿ ಗಾರ್ಡನ್ (ಸ್ಥ.ಕ್ಷೇ.88), ಮರ್ಫಿ ಟೌನ್ (ಸ್ಥ.ಕ್ಷೇ.89), ಹಲಸೂರು (ಸ್ಥ.ಕ್ಷೇ.90), ಮ್ಯಾಕ್ಸಿ ಐವರ್ ಟೌನ್ (ಸ್ಥ.ಕ್ಷೇ.91), ರಿಚ್ಮಂಡ್ ಟೌನ್ (ಸ್ಥ.ಕ್ಷೇ.92), ಅಶೋಕನಗರ (ಸ್ಥ.ಕ್ಷೇ.93), ಆಸ್ಟಿನ್ ಟೌನ್ (ಸ್ಥ.ಕ್ಷೇ.94), ಹೊನ್ನಾರಪೇಟೆ (ಸ್ಥ.ಕ್ಷೇ.95), ದೊಮ್ಮಲೂರು (ಸ್ಥ.ಕ್ಷೇ.96), ಇಂದಿರಾನಗರ (ಸ್ಥ.ಕ್ಷೇ.97) ಸ್ಥಳೀಯ ಕ್ಷೇತ್ರಗಳು ಬರುತ್ತವೆ.

- ವಿಚಾರಣಾಧಿಕಾರಿಗಳು, ನಗರಮಾಪನ ತಂಡ–3 ರ ವ್ಯಾಪ್ತಿಯಲ್ಲಿ ಆವಲಹಳ್ಳಿ (ಸ್ಥ.ಕ್ಷೇ.17), ಶ್ರೀನಗರ (ಸ್ಥ.ಕ್ಷೇ.18), ಹನುಮಂತನಗರ (ಸ್ಥ.ಕ್ಷೇ.19), ಎನ್.ಆರ್. ಕಾಲೋನಿ (ಸ್ಥ.ಕ್ಷೇ.20), ತ್ಯಾಗರಾಜನಗರ (ಸ್ಥ.ಕ್ಷೇ.21), ಬನಶಂಕರಿ 2ನೇ ಹಂತ (ಸ್ಥ.ಕ್ಷೇ.22), ಸಾರಕ್ಕಿ (ಸ್ಥ.ಕ್ಷೇ.23), ಜಯನಗರ 8ನೇ ಬ್ಲಾಕ್ (ಸ್ಥ.ಕ್ಷೇ.24), ಜಯನಗರ 5ನೇ ಬ್ಲಾಕ್ (ಸ್ಥ.ಕ್ಷೇ.25), ಜಯನಗರ 4ನೇ ಬ್ಲಾಕ್ (ಸ್ಥ.ಕ್ಷೇ.26), ಜಯನಗರ 9ನೇ ಬ್ಲಾಕ್ (ಸ್ಥ.ಕ್ಷೇ.27), ಜಯನಗರ 1 ಮತ್ತು 2ನೇ ಬ್ಲಾಕ್ (ಸ್ಥ.ಕ್ಷೇ.28), ಜಯನಗರ 4ನೇ ಬ್ಲಾಕ್ (ಸ್ಥ.ಕ್ಷೇ.29), ಜಯನಗರ 7ನೇ ಬ್ಲಾಕ್ (ಸ್ಥ.ಕ್ಷೇ.30), ಜಯನಗರ 6ನೇ ಬ್ಲಾಕ್ (ಸ್ಥ.ಕ್ಷೇ.31), ಜಯನಗರ 3ನೇ ಬ್ಲಾಕ್ (ಸ್ಥ.ಕ್ಷೇ.32), ಜಯನಗರ 2ನೇ ಬ್ಲಾಕ್ (ಸ್ಥ.ಕ್ಷೇ.33), ಜಯನಗರ 1ನೇ ಬ್ಲಾಕ್ (ಸ್ಥ.ಕ್ಷೇ.34), ವಿಲ್ಸನ್ ಗಾರ್ಡನ್ (ಸ್ಥ.ಕ್ಷೇ.35), ಸುದ್ದಗುಂಟೆಪಾಳ್ಯ (ಸ್ಥ.ಕ್ಷೇ.36), ಮಡಿವಾಳ (ಸ್ಥ.ಕ್ಷೇ.37), ಕೋರಮಂಗಲ (ಸ್ಥ.ಕ್ಷೇ.38), ಆಡುಗೋಡಿ (ಸ್ಥ.ಕ್ಷೇ.39), ನೀಲಸಂದ್ರ (ಸ್ಥ.ಕ್ಷೇ.40), ಶಾಂತಿನಗರ (ಸ್ಥ.ಕ್ಷೇ.41), ಕಲಾಸಿಪಾಳ್ಯ (ಸ್ಥ.ಕ್ಷೇ.42), ಲಾಲ್‌ಬಾಗ್ ಮಾವಳ್ಳಿ (ಸ್ಥ.ಕ್ಷೇ.43), ವಿಶ್ವೇಶ್ವರಪುರಂ (ಸ್ಥ.ಕ್ಷೇ.44), ಬಸವನಗುಡಿ (ಸ್ಥ.ಕ್ಷೇ.45), ಶಂಕರಪುರ(ಸ್ಥ.ಕ್ಷೇ.46), ಕೆಂಪೇಗೌಡನಗರ (ಸ್ಥ.ಕ್ಷೇ.47), ಚಾಮರಾಜಪೇಟೆ (ಸ್ಥ.ಕ್ಷೇ.48), ಅಜಾದ್‌ನಗರ (ಸ್ಥ.ಕ್ಷೇ.49), ವಾಲ್ಮೀಕಿನಗರ (ಸ್ಥ.ಕ್ಷೇ.50) ಸ್ಥಳೀಯ ಕ್ಷೇತ್ರಗಳು ಬರುತ್ತವೆ.
- ಈ 3 ಅಧಿಕಾರಿಗಳು ಅವರವರ ಸ್ಥಳೀಯ ಕ್ಷೇತ್ರಗಳಿಗೆ ಸಂಬಂಧಪಟ್ಟಂತೆ ಕರ್ನಾಟಕ ಭೂಕಂದಾಯ ನಿಯಮಾವಳಿ 1966 ರ ನಿಯಮ 83 ರನ್ವಯ ವಿಚಾರಣೆ ಆಗದೇ ಇರುವ ನಗರಾಸ್ತಿಗಳ ಬಗ್ಗೆ ವಿಚಾರಣೆಯನ್ನು ಮಾಡಿ ಹಕ್ಕು ಮತ್ತು ಗಡಿಯನ್ನು ನಿರ್ಧರಿಸಿ, ವಿಚಾರಣಾ ವಹಿಯಲ್ಲಿ ದಾಖಲ್ಮಾಡಿ ದೃಢೀಕರಿಸುವುದು.
- ಮೇಲಾಧಿಕಾರಿಗಳ ನಿರ್ದೇಶನದನ್ವಯ ಮರು ವಿಚಾರಣೆ ಮಾಡಿ ಇತ್ಯರ್ಥಪಡಿಸುವುದು.
- ನಗರಾಸ್ತಿಗಳ ಸ್ಥಳ ಪರಿಶೀಲನೆ.
- ಕಛೇರಿಯ ಸಿಬ್ಬಂದಿಯ ಕೆಲಸ ಕಾರ್ಯಗಳ ನಿಯಂತ್ರಣ ಹಾಗೂ ಮೇಲ್ವಿಚಾರಣೆ.
- ಕಛೇರಿಯ ಪ್ರಗತಿ, ಕಾರ್ಯ ನಿರ್ವಹಣೆ ಬಗ್ಗೆ ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರ ಮಾಪನ, ದಕ್ಷಿಣ ವಲಯ, ಬೆಂಗಳೂರು ಇವರಿಗೆ ವರದಿ ನೀಡುವುದು.

(3) **ಭೂದಾಖಲೆಗಳ ಉಪ ನಿರ್ದೇಶಕರು, ನಗರಮಾಪನ, ಬೆಂಗಳೂರು :–**

- ಭೂದಾಖಲೆಗಳ ಸಹಾಯಕ ನಿರ್ದೇಶಕರು, ನಗರಮಾಪನ ತಂಡ–1,2 ಮತ್ತು 3ರ ಕಛೇರಿಯ ನಿಯಂತ್ರಣಾಧಿಕಾರಿಯಾಗಿರುತ್ತಾರೆ.
- ಈ ಮೇಲ್ಕಂಡ 3 ಅಧಿಕಾರಿಗಳು ಮಾಡಿದ ಆದೇಶದ ಮೇಲೆ ಕರ್ನಾಟಕ ಭೂಕಂದಾಯ ಅಧಿನಿಯಮ 1964 ರ ಕಲಂ 136 (2) ರಡಿಯಲ್ಲಿ ನಗರಾಸ್ತಿಗಳಿಗೆ ಸಂಬಂಧಿಸಿದಂತೆ ಮೇಲ್ಮನವಿ ಪ್ರಾಧಿಕಾರ.
- ನಗರಮಾಪನ ಆಸ್ತಿಗಳಿಗೆ ಸಂಬಂಧಪಟ್ಟಂತೆ ಹದ್ದುಬಸ್ತು ಮೇಲ್ಮನವಿಯನ್ನು ಕರ್ನಾಟಕ ಭೂಕಂದಾಯ ನಿಯಮಾವಳಿ 1966 ರ ನಿಯಮ 139(2) ರಡಿಯಲ್ಲಿ ಇತ್ಯರ್ಥಪಡಿಸುವುದು.

(4) **ಗ್ರೂಪ್ ಎ ಇನ್‌ಸ್ಟ್ರಕ್ಟರ್ (ತರಬೇತಿ ಸಂಸ್ಥೆ, ಮೈಸೂರು/ಗುಲ್ಬರ್ಗಾ):–**

- ಇಲಾಖಾ ತರಬೇತಿ ಸಂಸ್ಥೆಯಲ್ಲಿ ತರಬೇತಿಗಳಿಗೆ ಸಂಬಂಧಿಸಿದಂತೆ, ಪಠ್ಯಕ್ರಮವನ್ನು ಪ್ರಾಚಾರ್ಯರ ನಿರ್ದೇಶನದಂತೆ ತಯಾರಿಸುವುದು.
- ತರಬೇತಿಗೆ ನಿಯೋಜಿಸಿದ ಶಿಕ್ಷಣಾರ್ಥಿಗಳ ಹಾಜರಾತಿಯ ನಿಯಂತ್ರಣ.
- ಇಲಾಖಾ ಕಾರ್ಯನಿರ್ವಾಹಕ ಸಿಬ್ಬಂದಿಗೆ ಸಂಬಂಧಪಟ್ಟಂತೆ ತರಬೇತಿಯಲ್ಲಿ ಪ್ರಾಯೋಗಿಕ ಪರೀಕ್ಷೆಯನ್ನು ನಡೆಸುವುದು.
- ಶಿಕ್ಷಣಾರ್ಥಿಗಳ ಪರೀಕ್ಷಾ ಮೌಲ್ಯಮಾಪನ
- ಶಿಕ್ಷಣಾರ್ಥಿಗಳಿಗೆ ಇಲಾಖಾ ವಿಷಯಕ್ಕೆ ಸಂಬಂಧಪಟ್ಟಂತೆ ಉಪನ್ಯಾಸ ಮತ್ತು ಇತರೆ ಬೋಧಕರ ಮೇಲೆ ಉಸ್ತುವಾರಿ.

4. **ಭೂದಾಖಲೆಗಳ ಸಹಾಯಕ ನಿರ್ದೇಶಕರು (ಕಾ.ನಿ) ( ಗ್ರೂಪ್ ಬಿ ವೃಂದದ ಶ್ರೇಣಿ –66 ಹುದ್ದೆಗಳು):–**

| | | |
|---|---|---|
| (1) | ಎಲ್ಲಾ ಉಪವಿಭಾಗಾಧಿಕಾರಿಗಳ ಕಛೇರಿಯಲ್ಲಿ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಸಹಾಯಕ ನಿರ್ದೇಶಕರು (ಉಪವಿಭಾಗಾಧಿಕಾರಿಗಳು, ಬೈಲಹೊಂಗಲ, ಬೆಳಗಾಂ, ಚಿಕ್ಕೋಡಿ, ಸಾಗರ ಮತ್ತು ಬೆಂಗಳೂರು ಉತ್ತರ ಹೊರತುಪಡಿಸಿ) | =47 |
| (2) | ಭೂದಾಖಲೆಗಳ ಸಹಾಯಕ ನಿರ್ದೇಶಕರು, ನಗರಮಾಪನ ತಂಡ– 1,2 ಮತ್ತು3, ಬೆಂಗಳೂರು | =03 |
| (3) | ಭೂದಾಖಲೆಗಳ ಸಹಾಯಕ ನಿರ್ದೇಶಕರು, ನಗರಮಾಪನ, ದಾವಣಗೆರೆ, ಬಳ್ಳಾರಿ / ಬೆಳಗಾಂ / ಗುಲ್ಬರ್ಗಾ / ಬಿಜಾಪುರ / ಮೈಸೂರು / ಹುಬ್ಬಳ್ಳಿ– ಧಾರವಾಡ | =07 |
| (4) | ಭೂದಾಖಲೆಗಳ ಸಹಾಯಕ ನಿರ್ದೇಶಕರು, ಮರುಭೂಮಾಪನ, ಬೆಳಗಾಂ/ಹುಕ್ಕೇರಿ / ಖಾನಾಪುರ | =03 |
| (5) | ಭೂದಾಖಲೆಗಳ ಸಹಾಯಕ ನಿರ್ದೇಶಕರು, ಕೇಂದ್ರಕಛೇರಿ, ಬೆಂಗಳೂರು | =02 |
| (6) | ಗ್ರೂಪ್ ಬಿ ಇನ್ಸ್‌ಟ್ರಕ್ಟರ್, ತರಬೇತಿ ಸಂಸ್ಥೆ, ಮೈಸೂರು / ಗುಲ್ಬರ್ಗಾ | =02 |
| (7) | ಭೂದಾಖಲೆಗಳ ಸಹಾಯಕ ನಿರ್ದೇಶಕರು, ನಗರಮಾಪನ ಯೋಜನಾಧಿಕಾರಿಗಳ ಕಛೇರಿ, ಮೈಸೂರು / ಶಿವಮೊಗ್ಗ | =02 |
| | **ಒಟ್ಟು** | **=66** |

(1) **ಎಲ್ಲಾ ಉಪವಿಭಾಗಾಧಿಕಾರಿಗಳ ಕಛೇರಿಯಲ್ಲಿ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಸಹಾಯಕ ನಿರ್ದೇಶಕರು :– (47 ಹುದ್ದೆಗಳು)**

- ಉಪವಿಭಾಗಾಧಿಕಾರಿಗಳ ಕಛೇರಿಯಲ್ಲಿ ಉಪವಿಭಾಗಾಧಿಕಾರಿಗಳಿಗೆ ಭೂಮಾಪನ ವಿಷಯಕ್ಕೆ ಸಂಬಂಧಿಸಿದಂತೆ ತಾಂತ್ರಿಕ ಸಲಹೆಗಾರರಾಗಿ ಕಾರ್ಯ ನಿರ್ವಹಿಸುತ್ತಾರೆ.

(2) **ಭೂದಾಖಲೆಗಳ ಸಹಾಯಕ ನಿರ್ದೇಶಕರು, ನಗರಮಾಪನ ತಂಡ– 1,2 ಮತ್ತು3, ಬೆಂಗಳೂರು :– (03 ಹುದ್ದೆಗಳು)**

- ಈ 3 ಜನ ಅಧಿಕಾರಿಗಳು ಸ್ವತಂತ್ರವಾಗಿ ಕಾರ್ಯ ನಿರ್ವಹಿಸುವ ಅಧಿಕಾರಿಯಾಗಿರುತ್ತಾರೆ.
- ಭೂದಾಖಲೆಗಳ ಸಹಾಯಕ ನಿರ್ದೇಶಕರು, ನಗರಮಾಪನ ತಂಡ–1 ರ ವ್ಯಾಪ್ತಿಯಲ್ಲಿ ಪೀಣ್ಯ (ಸ್ಥಳೀಯ ಕ್ಷೇತ್ರ–1), ಮಹಾಲಕ್ಷ್ಮಿ ಲೇ ಔಟ್ (ಸ್ಥ.ಕ್ಷೇ.2), ಯಶವಂತಪುರ(ಸ್ಥ.ಕ್ಷೇ.3), ಮತ್ತೀಕೆರೆ (ಸ್ಥ.ಕ್ಷೇ.4), ಗೋಕುಲ (ಸ್ಥ.ಕ್ಷೇ.5),ಮಲ್ಲೇಶ್ವರಂ (ಸ್ಥ.ಕ್ಷೇ 6), ಸುಬ್ರಮಣ್ಯನಗರ (ಸ್ಥ.ಕ್ಷೇ.7), ರಾಜಾಜಿನಗರ 1ನೇ ಬ್ಲಾಕ್ (ಸ್ಥ.ಕ್ಷೇ.8), ರಾಜಾಜಿನಗರ 2ನೇ ಬ್ಲಾಕ್ (ಸ್ಥ.ಕ್ಷೇ.9), ರಾಜಾಜಿನಗರ 3ನೇ ಬ್ಲಾಕ್ (ಸ್ಥ.ಕ್ಷೇ.10), ರಾಜಾಜಿನಗರ 4ನೇ ಬ್ಲಾಕ್ (ಸ್ಥ.ಕ್ಷೇ.11), ರಾಜಾಜಿನಗರ 5ನೇ ಬ್ಲಾಕ್ (ಸ್ಥ.ಕ್ಷೇ.12), ರಾಜಾಜಿನಗರ 6ನೇ ಬ್ಲಾಕ್ (ಸ್ಥ.ಕ್ಷೇ.13), ವೆಸ್ಟ್ ಅಫ್ ಕಾರ್ಡ್ ರಸ್ತೆ (ಸ್ಥ.ಕ್ಷೇ.14), ವಿಜಯನಗರ (ಸ್ಥ.ಕ್ಷೇ.15), ಬಾಪೂಜಿನಗರ (ಸ್ಥ.ಕ್ಷೇ.16), ಗುಡ್ಡದಹಳ್ಳಿ (ಸ್ಥ.ಕ್ಷೇ.51), ಪಾದರಾಯನಪುರ (ಸ್ಥ.ಕ್ಷೇ.52), ಗೋರಿಪಾಳ್ಯ (ಸ್ಥ.ಕ್ಷೇ.53), ಕೆಂಪಾಪುರ ಅಗ್ರಹಾರ (ಸ್ಥ.ಕ್ಷೇ.55), ಗೋಪಾಲಪುರ (ಸ್ಥ.ಕ್ಷೇ.56), ರಾಮಚಂದ್ರಪುರ (ಸ್ಥ.ಕ್ಷೇ.57), ಪ್ರಕಾಶನಗರ (ಸ್ಥ.ಕ್ಷೇ.58), ಶ್ರೀರಾಮಪುರ (ಸ್ಥ.ಕ್ಷೇ.59) ಸ್ಥಳೀಯ ಕ್ಷೇತ್ರಗಳು ಒಳಪಡುತ್ತವೆ.
- ಭೂದಾಖಲೆಗಳ ಸಹಾಯಕ ನಿರ್ದೇಶಕರು, ನಗರಮಾಪನ ತಂಡ–2 ರ ವ್ಯಾಪ್ತಿಯಲ್ಲಿ ಆಂಜನಪ್ಪ ಗಾರ್ಡನ್ (ಸ್ಥ.ಕ್ಷೇ.54), ಸುಭಾಷ್‌ನಗರ (ಸ್ಥ.ಕ್ಷೇ.60), ಶೇಷಾದ್ರಿಪುರ (ಸ್ಥ.ಕ್ಷೇ.61), ರಾಜಮಹಲ್ ಗುಟ್ಟಹಳ್ಳಿ (ಸ್ಥ.ಕ್ಷೇ.62), ಗೆದ್ದಲಹಳ್ಳಿ (ಸ್ಥ.ಕ್ಷೇ.64), ಹೆಬ್ಬಾಳ (ಸ್ಥ.ಕ್ಷೇ.65), ಗಂಗೇನಹಳ್ಳಿ (ಸ್ಥ.ಕ್ಷೇ.66), ಮಠದಹಳ್ಳಿ (ಸ್ಥ.ಕ್ಷೇ.67), ಮುನಿರೆಡ್ಡಿಪಾಳ್ಯ (ಸ್ಥ.ಕ್ಷೇ.68), ಪಾಟರಿ ಟೌನ್ (ಸ್ಥ.ಕ್ಷೇ.69), ದೇವರಜೀವನಹಳ್ಳಿ (ಸ್ಥ.ಕ್ಷೇ.70), ಸದಾಶಿವನಗರ (ಸ್ಥ.ಕ್ಷೇ.63), ಸಗಾಯಿಪುರ (ಸ್ಥ.ಕ್ಷೇ.71), ಕೂಕ್ಸ್ ಟೌನ್ (ಸ್ಥ.ಕ್ಷೇ.72), ಲಿಂಗರಾಜಪುರ (ಸ್ಥ.ಕ್ಷೇ.73), ಮಾರುತಿಸೇವಾನಗರ (ಸ್ಥ.ಕ್ಷೇ.74), ಕಾಕ್ಸ್‌ಟೌನ್ (ಸ್ಥ.ಕ್ಷೇ.75), ಫ್ರೇಜರ್ ಟೌನ್ (ಸ್ಥ.ಕ್ಷೇ.76), ವಸಂತನಗರ (ಸ್ಥ.ಕ್ಷೇ.77), ಜಯಮಹಲ್ (ಸ್ಥ.ಕ್ಷೇ.78), ಕುಮಾರ ಪಾರ್ಕ್ (ಸ್ಥ.ಕ್ಷೇ.79), ಗಾಂಧೀನಗರ (ಸ್ಥ.ಕ್ಷೇ.80), ಚಿಕ್ಕಪೇಟೆ (ಸ್ಥ.ಕ್ಷೇ.81ಎ), ನಗರ್ತಪೇಟೆ (ಸ್ಥ.ಕ್ಷೇ.81ಬಿ),ಸಂಪಂಗಿರಾಮನಗರ (ಸ್ಥ.ಕ್ಷೇ.82), ಶಿವಾಜಿನಗರ (ಸ್ಥ.ಕ್ಷೇ.83), ಸುಲ್ತಾನಪೇಟೆ (ಸ್ಥ.ಕ್ಷೇ.84), ನೆಹರುಪುರ (ಸ್ಥ.ಕ್ಷೇ.85), ಭಾರತಿನಗರ (ಸ್ಥ.ಕ್ಷೇ.86), ಕಮರ್ಷಿಯಲ್ ಸ್ಟ್ರೀಟ್ (ಸ್ಥ.ಕ್ಷೇ.87), ಶಿವನಚೆಟ್ಟಿ ಗಾರ್ಡನ್ (ಸ್ಥ.ಕ್ಷೇ.88), ಮರ್ಫಿ ಟೌನ್ (ಸ್ಥ.ಕ್ಷೇ.89), ಹಲಸೂರು (ಸ್ಥ.ಕ್ಷೇ.90), ಮ್ಯಾಕ್ಸಿ ಐವರ್ ಟೌನ್ (ಸ್ಥ.ಕ್ಷೇ.91), ರಿಚ್ಮಂಡ್ ಟೌನ್ (ಸ್ಥ.ಕ್ಷೇ.92), ಅಶೋಕನಗರ (ಸ್ಥ.ಕ್ಷೇ.93), ಆಸ್ಟಿನ್ ಟೌನ್ (ಸ್ಥ.ಕ್ಷೇ.94), ಹೊನ್ನಾರಪೇಟೆ (ಸ್ಥ.ಕ್ಷೇ.95), ದೊಮ್ಮಲೂರು (ಸ್ಥ.ಕ್ಷೇ.96),ಇಂದಿರಾನಗರ (ಸ್ಥ.ಕ್ಷೇ.97) ಸ್ಥಳೀಯ ಕ್ಷೇತ್ರ ಗಳು ಒಳಪಡುತ್ತವೆ.
- ಭೂದಾಖಲೆಗಳ ಸಹಾಯಕ ನಿರ್ದೇಶಕರು, ನಗರಮಾಪನ ತಂಡ–3 ರ ವ್ಯಾಪ್ತಿಯಲ್ಲಿ ಆವಲಹಳ್ಳಿ (ಸ್ಥ.ಕ್ಷೇ.17), ಶ್ರೀನಗರ (ಸ್ಥ.ಕ್ಷೇ.18), ಹನುಮಂತನಗರ (ಸ್ಥ.ಕ್ಷೇ.19), ಎನ್.ಆರ್. ಕಾಲೋನಿ (ಸ್ಥ.ಕ್ಷೇ.20), ತ್ಯಾಗರಾಜನಗರ (ಸ್ಥ.ಕ್ಷೇ.21), ಬನಶಂಕರಿ 2ನೇ ಹಂತ (ಸ್ಥ.ಕ್ಷೇ.22), ಸಾರಕ್ಕಿ (ಸ್ಥ.ಕ್ಷೇ.23), ಜಯನಗರ 8ನೇ ಬ್ಲಾಕ್ (ಸ್ಥ.ಕ್ಷೇ.24), ಜಯನಗರ 5ನೇ ಬ್ಲಾಕ್ (ಸ್ಥ.ಕ್ಷೇ.25), ಜಯನಗರ 4ನೇ ಬ್ಲಾಕ್ (ಸ್ಥ.ಕ್ಷೇ.26), ಜಯನಗರ 9ನೇ ಬ್ಲಾಕ್ (ಸ್ಥ.ಕ್ಷೇ.27), ಜಯನಗರ 1 ಮತ್ತು 2ನೇ ಬ್ಲಾಕ್ (ಸ್ಥ.ಕ್ಷೇ.28), ಜಯನಗರ 4ನೇ ಬ್ಲಾಕ್ (ಸ್ಥ.ಕ್ಷೇ.29), ಜಯನಗರ 7ನೇ ಬ್ಲಾಕ್ (ಸ್ಥ.ಕ್ಷೇ.30), ಜಯನಗರ 6ನೇ ಬ್ಲಾಕ್ (ಸ್ಥ.ಕ್ಷೇ.31), ಜಯನಗರ 3ನೇ ಬ್ಲಾಕ್ (ಸ್ಥ.ಕ್ಷೇ.32), ಜಯನಗರ 2ನೇ ಬ್ಲಾಕ್ (ಸ್ಥ.ಕ್ಷೇ.33), ಜಯನಗರ 1ನೇ ಬ್ಲಾಕ್ (ಸ್ಥ.ಕ್ಷೇ.34), ವಿಲ್ಸನ್ ಗಾರ್ಡನ್ (ಸ್ಥ.ಕ್ಷೇ.35), ಸುದ್ದಗುಂಟೆಪಾಳ್ಯ (ಸ್ಥ.ಕ್ಷೇ.36),ಮಡಿವಾಳ (ಸ್ಥ.ಕ್ಷೇ.37), ಕೋರಮಂಗಲ (ಸ್ಥ.ಕ್ಷೇ.38), ಆಡುಗೋಡಿ (ಸ್ಥ.ಕ್ಷೇ.39), ನೀಲಸಂದ್ರ (ಸ್ಥ.ಕ್ಷೇ.40), ಶಾಂತಿನಗರ (ಸ್ಥ.ಕ್ಷೇ.41), ಕಲಾಸಿಪಾಳ್ಯ (ಸ್ಥ.ಕ್ಷೇ.42), ಲಾಲ್‌ಬಾಗ್ ಮಾವಳ್ಳಿ (ಸ್ಥ.ಕ್ಷೇ.43), ವಿಶ್ವೇಶ್ವರಪುರಂ (ಸ್ಥ.ಕ್ಷೇ.44), ಬಸವನಗುಡಿ (ಸ್ಥ.ಕ್ಷೇ.45), ಶಂಕರಪುರ(ಸ್ಥ.ಕ್ಷೇ.46), ಕೆಂಪೇಗೌಡನಗರ (ಸ್ಥ.ಕ್ಷೇ.47), ಚಾಮರಾಜಪೇಟೆ (ಸ್ಥ.ಕ್ಷೇ.48), ಅಜಾದ್‌ನಗರ (ಸ್ಥ.ಕ್ಷೇ.49), ವಾಲ್ಮೀಕಿನಗರ (ಸ್ಥ.ಕ್ಷೇ.50) ಸ್ಥಳೀಯ ಕ್ಷೇತ್ರಗಳು ಒಳಪಡುತ್ತವೆ.
- ನಗರಾಸ್ತಿಗಳಿಗೆ ಸಂಬಂಧಿಸಿದಂತೆ ಪುನರಾವಲೋಕನ ಮಾಡುವ ಬಗ್ಗೆ ಆಸ್ತಿ ಮಾಲೀಕರಿಗೆ ನೋಟೀಸು ಜಾರಿ ಮಾಡುವುದು.
- ನಗರಾಸ್ತಿಗಳಿಗೆ ಸಂಬಂಧಿಸಿದಂತೆ ಹಕ್ಕು ಬದಲಾವಣೆ ಮತ್ತು ಭೂಸ್ವಾಧೀನ ಅಳತೆ ಕೆಲಸ.
- ನಗರಾಸ್ತಿಗಳ ಸ್ಥಳ ಪರಿಶೀಲನೆ ಹಾಗೂ ತಿದ್ದುಪಡಿ ಪ್ರಕರಣಗಳ ಪ್ರಸ್ತಾವನೆ.
- ನಗರಾಸ್ತಿಗಳ ನಕಲು ಮತ್ತು ನಕ್ಷೆ ವಿತರಣೆ.
- ಸನ್ನದು ಫೀ ವಸೂಲಿ

(3) **ಭೂದಾಖಲೆಗಳ ಸಹಾಯಕ ನಿರ್ದೇಶಕರು, ನಗರಮಾಪನ, ದಾವಣಗೆರೆ, ಬಳ್ಳಾರಿ / ಬೆಳಗಾಂ /ಗುಲ್ಬರ್ಗಾ/ ಬಿಜಾಪುರ / ಮೈಸೂರು / ಹುಬ್ಬಳ್ಳಿ– ಧಾರವಾಡ :– (07 ಹುದ್ದೆಗಳು)**

- ನಗರಾಸ್ತಿಗಳಿಗೆ ಸಂಬಂಧಿಸಿದಂತೆ ಪುನರಾವಲೋಕನ ಮಾಡುವ ಬಗ್ಗೆ ಆಸ್ತಿ ಮಾಲೀಕರಿಗೆ ನೋಟೀಸು ಜಾರಿ ಮಾಡುವುದು.
- ನಗರಾಸ್ತಿಗಳಿಗೆ ಸಂಬಂಧಿಸಿದಂತೆ ಹಕ್ಕು ಬದಲಾವಣೆ ಮತ್ತು ಭೂಸ್ವಾಧೀನ ಅಳತೆ ಕೆಲಸ.
- ನಗರಾಸ್ತಿಗಳ ಸ್ಥಳ ಪರಿಶೀಲನೆ ಹಾಗೂ ತಿದ್ದುಪಡಿ ಪ್ರಕರಣಗಳ ಪ್ರಸ್ತಾವನೆ.
- ನಗರಾಸ್ತಿಗಳ ನಕಲು ಮತ್ತು ನಕ್ಷೆ ವಿತರಣೆ.
- ಸನ್ನದು ಫೀ ವಸೂಲಿ

(4) **ಭೂದಾಖಲೆಗಳ ಸಹಾಯಕ ನಿರ್ದೇಶಕರು, ಮರುಭೂಮಾಪನ, ಬೆಳಗಾಂ / ಹುಕ್ಕೇರಿ / ಖಾನಾಪುರ :– (03 ಹುದ್ದೆಗಳು)**

- ಭೂಮಿಯ ಮೇಲಿನ ಬೌಗೋಳಿಕ ಅಂಶಗಳಲ್ಲಿ ಬಹಳಷ್ಟು ಬದಲಾವಣೆಗಳಾಗಿದ್ದು, ಅದನ್ನು ಅತ್ಯಾಧುನಿಕ ಉಪಕರಣಗಳ ಮೂಲಕ ಮರುಭೂಮಾಪನ ಮಾಡಿ ದಾಖಲೆಗಳನ್ನು ತಯಾರಿಸಿ, ನಿರ್ವಹಿಸುವುದು.
- ರೀಸರ್ವೆ ಸಂದರ್ಭದಲ್ಲಿ ಉಂಟಾಗಬಹುದಾದ ವಿವಾದಾತ್ಮಕ ಪ್ರಕರಣಗಳಲ್ಲಿ ವಿಚಾರಣೆ ಕೈಗೊಂಡು ಇತ್ಯರ್ಥಪಡಿಸುವುದು.

(5) **ಭೂದಾಖಲೆಗಳ ಸಹಾಯಕ ನಿರ್ದೇಶಕರು, ಕೇಂದ್ರಕಛೇರಿ, ಬೆಂಗಳೂರು :– (02 ಹುದ್ದೆಗಳು)**

- ಭೂದಾಖಲೆಗಳ ಜಂಟಿ ನಿರ್ದೇಶಕರು (ತಾಂತ್ರಿಕ) ಮತ್ತು (ವಿಚಾರಣೆ ಮತ್ತು ತನಿಖೆ) ಇವರಿಗೆ ತಾಂತ್ರಿಕ ವಿಷಯಗಳಿಗೆ ಕೇಂದ್ರಕಛೇರಿಯ ಅಧೀನ ಸಿಬ್ಬಂದಿಗಳಿಂದ ಸ್ವೀಕೃತವಾದ ಕಡತಗಳನ್ನು ಪರಿಶೀಲಿಸಿ, ಮಂಡಿಸುವುದು.
- ಕೇಂದ್ರಕಛೇರಿಯ ಮೇಲಾಧಿಕಾರಿಗಳ ಸೂಚನೆಯನ್ವಯ ಕೆಲಸ ನಿರ್ವಹಿಸುವುದು.

(6) **ಗ್ರೂಪ್ ಬಿ ಇನ್ಸ್‌ಟ್ರಕ್ಟರ್, ತರಬೇತಿ ಸಂಸ್ಥೆ, ಮೈಸೂರು / ಗುಲ್ಬರ್ಗಾ : –(02 ಹುದ್ದೆಗಳು)**

- ಇಲಾಖಾ ತರಬೇತಿ ಸಂಸ್ಥೆಯಲ್ಲಿ ತರಬೇತಿಗಳಿಗೆ ಸಂಬಂಧಿಸಿದಂತೆ, ಪಠ್ಯಕ್ರಮವನ್ನು ಪ್ರಾಚಾರ್ಯರ ನಿರ್ದೇಶನದಂತೆ ತಯಾರಿಸುವುದು.
- ತರಬೇತಿಗೆ ನಿಯೋಜಿಸಿದ ಶಿಕ್ಷಣಾರ್ಥಿಗಳ ಹಾಜರಾತಿಯ ನಿಯಂತ್ರಣ.
- ಇಲಾಖಾ ಕಾರ್ಯನಿರ್ವಾಹಕ ಸಿಬ್ಬಂದಿಗೆ ಸಂಬಂಧಪಟ್ಟಂತೆ ತರಬೇತಿಯಲ್ಲಿ ಪ್ರಾಯೋಗಿಕ ಪರೀಕ್ಷೆಯನ್ನು ನಡೆಸುವುದು.
- ಶಿಕ್ಷಣಾರ್ಥಿಗಳ ಪರೀಕ್ಷಾ ಮೌಲ್ಯಮಾಪನ
- ಶಿಕ್ಷಣಾರ್ಥಿಗಳಿಗೆ ಇಲಾಖಾ ವಿಷಯಕ್ಕೆ ಸಂಬಂಧಪಟ್ಟಂತೆ ಉಪನ್ಯಾಸ ಮತ್ತು ಇತರೆ ಬೋಧಕರ ಮೇಲೆ ಉಸ್ತುವಾರಿ.

(7) **ಭೂದಾಖಲೆಗಳ ಸಹಾಯಕ ನಿರ್ದೇಶಕರು, ನಗರಮಾಪನ ಯೋಜನಾಧಿಕಾರಿಗಳ ಕಛೇರಿ, ಮೈಸೂರು / ಶಿವಮೊಗ್ಗ:(02 ಹುದ್ದೆಗಳು)**

- ಸಂಬಂಧಪಟ್ಟ ನಗರಯೋಜನಾಧಿಕಾರಿಗಳ ಸೂಚನೆ ಮತ್ತು ನಿರ್ದೇಶನದನ್ವಯ ನಗರಾಸ್ತಿ ಕಾರ್ಯಗಳನ್ನು ನಿರ್ವಹಿಸುವುದು.
- ನಗರಾಸ್ತಿಗಳ ಬಗ್ಗೆ ನಗರಮಾಪನ ಕಾರ್ಯ ಕೈಗೊಂಡಾಗ ಅವುಗಳನ್ನು ವಿಚಾರಣೆ ಮಾಡಿ ಇತ್ಯರ್ಥಪಡಿಸುವುದು ಮತ್ತು ನಿರ್ವಹಿಸುವುದು.

5. **ಅಧೀಕ್ಷಕರು (ಕಾ.ನಿ):–**

- ಇವರು ಗ್ರೂಪ್ ಸಿ ನೌಕರರಾಗಿದ್ದು, ಕೆಲಸ ನಿರ್ವಹಿಸುತ್ತಿರುವ ಕಛೇರಿಗಳಲ್ಲಿ ಕಾರ್ಯ ನಿರ್ವಾಹಕ ನೌಕರರ ಶಾಖಾ ಮುಖ್ಯಸ್ಥರಾಗಿರುತ್ತಾರೆ.
- ಈ ವೃಂದದ ಹುದ್ದೆಗೆ ಯಾವುದೇ ಶಾಸನಬದ್ಧ ಅಧಿಕಾರಗಳಿರುವುದಿಲ್ಲ.
- ಶಾಖೆಗೆ ಸಂಬಂಧಿಸಿದ ವಿಷಯ ನಿರ್ವಾಹಕರ ಕೆಲಸದ ನಿಯಂತ್ರಣ ಮತ್ತು ಮೇಲ್ವಿಚಾರಣೆ.
- ಕಛೇರಿ ಕೈಪಿಡಿಯನ್ವಯ ವಹಿಸಿದ ಕಾರ್ಯವನ್ನು ಕ್ರಮಬದ್ಧವಾಗಿ ನಿರ್ವಹಿಸುವುದು.

6. **ತಪಾಸಕರು :–**

- ತಾಲ್ಲೂಕು ಮಟ್ಟದಲ್ಲಿ ಭೂಮಾಪನ ಶಾಖೆಯ ಮುಖ್ಯಸ್ಥರಾಗಿದ್ದು, ತಹಶೀಲ್ದಾರ್‌ರವರಿಗೆ ಭೂಮಾಪನ ವಿಷಯಕ್ಕೆ ತಾಂತ್ರಿಕ ಸಲಹೆಗಾರರಾಗಿರುತ್ತಾರೆ.
- ತಹಶೀಲ್ದಾರ್‌ರವರ ಅನುಮೋದನೆಯೊಂದಿಗೆ ಅಡವಿ ಕೆಲಸ ನಿರ್ವಹಿಸುವ ಭೂಮಾಪಕರಿಗೆ ವಿವಿಧ ಸ್ವರೂಪದ ಕಡತಗಳನ್ನು ವಿತರಣೆ ಮಾಡಿ, ಕೆಲಸಗಳನ್ನು ನಿರ್ವಹಿಸಿದ ನಂತರ ಹಿಂದಕ್ಕೆ ಪಡೆದು ಅವುಗಳ ಗುಣಮಟ್ಟವನ್ನು ಪರಿಶೀಲಿಸಿ, ಮುಂದಿನ ಅಗತ್ಯ ಕ್ರಮದ ಬಗ್ಗೆ ತಹಶೀಲ್ದಾರ್‌ರವರಿಗೆ ಮಂಡಿಸುವುದು.
- 11ಇ ನಕ್ಷೆ ಕೋರಿ ಬರುವ ಅರ್ಜಿಗಳ ಬಗ್ಗೆ ಪರಿಶೀಲಿಸಿ, ಪರವಾನಗಿ ಭೂಮಾಪಕರಿಗೆ ಅಳತೆ ಕೆಲಸಕ್ಕೆ ವಿತರಿಸಿ, ಅಳತೆಯಾಗಿ ಬಂದ ಕಡತಗಳನ್ನು ತಪಾಸಣೆಗೆ ಒಳಪಡಿಸಿ ನಿಯಮಾನುಸಾರ ದೃಢೀಕರಿಸಿ,ಮೋಜಿಣಿ ತಂತ್ರಾಂಶದ ಮೂಲಕ ಅರ್ಜಿದಾರರಿಗೆ ವಿತರಿಸುವುದು ಮತ್ತು ಮೋಜಿಣಿ ತಂತ್ರಾಂಶದ ಮುಖೇನ ಸೂಚಿಸಲ್ಪಟ್ಟ ಪ್ರಕರಣಗಳಲ್ಲಿ ಅಡವಿ ತಪಾಸಣೆಯನ್ನು ಕೈಗೊಂಡು ಸೂಕ್ತ ಅವಶ್ಯ ಕ್ರಮ ಜರುಗಿಸುವುದು.
- ಭೂಮಾಪಕರಿಗೆ ಕ್ಲಿಷ್ಟಕರ ಪ್ರಕರಣಗಳಿಗೆ ಸಲಹೆ ಮತ್ತು ಮಾರ್ಗದರ್ಶನ.
- ಪೋಡಿ ಪ್ರಕರಣಗಳು ಮತ್ತು ಐ.ಎಂ.ಪಿ. ಪ್ರಕರಣಗಳಲ್ಲಿ ದುರಸ್ತಿಗೆ ಕಡತವನ್ನು ತಯಾರಿಸಿ, ತಹಶೀಲ್ದಾರ್‌ರವರ ದೃಢೀಕರಣಕ್ಕಾಗಿ ಮಂಡಿಸುವುದು.
- ಸಾರ್ವಜನಿಕರಿಂದ ಕೋರಿ ಬರುವ ಎಲ್ಲಾ ಸ್ವರೂಪದ ಸರ್ವೆ ದಾಖಲೆಗಳ ನಕಲುಗಳನ್ನು ದೃಢೀಕರಿಸಿ ವಿತರಿಸುವುದು.
- ತಹಶೀಲ್ದಾರ್ ಕಛೇರಿಯಲ್ಲಿನ ಸರ್ಕಾರಿ ಮತ್ತು ಪರವಾನಗಿ ಭೂಮಾಪಕರ ನಿಯಂತ್ರಣ ಮತ್ತು ಮೇಲುಸ್ತುವಾರಿ.
- ಕಂದಾಯ ಅಧಿಕಾರಿಗಳು ಮತ್ತು ಇಲಾಖಾ ಅಧಿಕಾರಿಗಳ ಸಭೆಗಳಿಗೆ ಮಾಹಿತಿ ಸಂಗ್ರಹಿಸಿ, ಹಾಜರಾಗುವುದು.

7. **ಭೂಮಾಪಕರು :–**

- ಈ ಮುಂದೆ ನಮೂದಿಸಿದ ಎಲ್ಲಾ ಸ್ವರೂಪದ ಪೋಡಿ ಕಡತಗಳ ಅಳತೆ ಕೆಲಸ ನಿರ್ವಹಿಸಿ,ಕಡತ ತಯಾರು ಮಾಡಿ, ಮಂಡಿಸುವುದು. ದರಖಾಸ್ತು, ಭೂಪರಿವರ್ತನೆ, ಭೂಸ್ವಾಧೀನ, ಜಂಟಿ ಅಳತೆ ಪ್ರಕರಣ, ಭೂಸುಧಾರಣೆ, ಕೋರ್ಟ್ ಕಮಿಷನ್ ಪ್ರಕರಣ, ಡಿಕ್ರಿ ಪಾರ್ಟಿಷನ್, ತಿದ್ದುಪಡಿ ಪ್ರಕರಣಗಳು, ಸರ್ಕಾರಿ ಜಮೀನಿಗೆ ಸಂಬಂಧಪಟ್ಟ ಪ್ರಕರಣಗಳು.
- ಹದ್ದುಬಸ್ತು ಅಳತೆ ಪ್ರಕರಣಗಳನ್ನು ನಿರ್ವಹಿಸುವುದು.
- ಮಾಸಿಕ ಕಾರ್ಯಕ್ರಮ ಪಟ್ಟಿಯಂತೆ ಕೆಲಸ ನಿರ್ವಹಿಸುವುದು.
- ಮೇಲಾಧಿಕಾರಿಗಳ ಸ್ಥಳ ತನಿಖೆಗೆ ಹಾಜರಾಗುವುದು.
- ಪೋಡಿ ಕಡತಗಳ ತಪಾಸಣೆ / ದುರಸ್ಥಿ ಕೆಲಸ ನಿರ್ವಹಿಸುವುದು.
- ಅಭಿಲೇಖಾಲಯದ ಸಂರಕ್ಷಣೆ ಮತ್ತು ದಾಖಲೆಗಳ ನಕಲು ತಯಾರಿಕೆ.

**ಆಡಳಿತ ಶಾಖೆ**

8. **ಉಪ ನಿರ್ದೇಶಕರು (ಆಡಳಿತ): – (ಗ್ರೂಪ್ ಎ ಶ್ರೇಣಿ –1 ಹುದ್ದೆ)**

- ಆಡಳಿತ ವಿಷಯಗಳಲ್ಲಿ ಆಯುಕ್ತರು / ನಿರ್ದೇಶಕರಿಗೆ ನಿರ್ಣಯ ತೆಗೆದುಕೊಳ್ಳಲು ಸಹಕರಿಸುತ್ತಾರೆ.
- ಇಲಾಖಾ ಅಧಿಕಾರಿ / ನೌಕರರುಗಳ ಸೇವಾ ವಿಷಯಗಳಾದ ನೇಮಕಾತಿ, ವರ್ಗಾವಣೆ, ಮುಂಬಡ್ತಿ, ರಜೆ, ಆಸ್ತಿ ಋಣ ತ:ಖ್ತೆ, ಜೇಷ್ಠತೆ, ವೇತನ ಬಡ್ತಿ, ಶಿಸ್ತು ಪ್ರಕರಣಗಳು ಹಾಗೂ ಇತರೆ ಆಡಳಿತ ವಿಷಯಗಳ ಬಗ್ಗೆ ಅಂತಿಮ ರೂಪ ನೀಡುವ ಜವಾಬ್ದಾರಿ.
- ಕೇಂದ್ರ ಕಚೇರಿಯ ಗ್ರೂಪ್ ಸಿ ಮತ್ತು ಡಿ ನೌಕರರುಗಳಿಗೆ ಶಿಸ್ತು ನಡವಳಿಯಲ್ಲಿ ಲಘು ದಂಡನೆಯನ್ನು ವಿಧಿಸುವ ಅಧಿಕಾರ.

9. **ಲೆಕ್ಕಾಧಿಕಾರಿಗಳು :– (ಗ್ರೂಪ್ ಎ ಶ್ರೇಣಿ –1 ಹುದ್ದೆ)**

(ರಾಜ್ಯ ಲೆಕ್ಕ ನಿಯಂತ್ರಣ ಇಲಾಖೆಯಿಂದ ನಿಯೋಜನೆ)

- ಇಲಾಖಾ ಯೋಜನೆ ಮತ್ತು ಲೆಕ್ಕ ವಿಷಯಗಳಿಗೆ ಸಂಬಂಧಿಸಿದಂತೆ ಆಯುಕ್ತರಿಗೆ ಸಹಕರಿಸುವುದು.
- ಇಲಾಖೆಗೆ ಸಂಬಂಧಪಟ್ಟಂತಹ ವೇತನ ಬಟವಾಡೆ, ಸಾದಿಲ್ವಾರು ವೆಚ್ಚ, ವೇತನ ನಿಗದಿ, ನಿವೃತ್ತಿ ವೇತನ, ಜಿ.ಪಿ.ಎಫ್.ಮುಂಗಡ, ಹಬ್ಬದ ಮುಂಗಡ, ಪ್ರವಾಸ ಭತ್ಯೆ ಬಿಲ್ಲುಗಳು, ಎ.ಸಿ. ಮತ್ತು ಡಿ.ಸಿ. ಬಿಲ್ಲುಗಳು ಇತ್ಯಾದಿ.
- ವಾರ್ಷಿಕ ಬಜೆಟ್ ತಯಾರಿಕೆ (ಪ್ಲಾನ್ ಮತ್ತು ನಾನ್ ಪ್ಲಾನ್)
- ಕ್ಲಿಷ್ಟಕರ ವಿಷಯಗಳಲ್ಲಿ ಲೆಕ್ಕ ವಿಷಯಕ್ಕೆ ಸಂಬಂಧಿಸಿದಂತೆ ವಿಷಯನಿರ್ವಾಹಕರಿಗೆ ಹಾಗೂ ಸಂಬಂಧಪಟ್ಟ ಅಧೀಕ್ಷಕರುಗಳಿಗೆ ಸಲಹೆ ಮತ್ತು ಮಾರ್ಗದರ್ಶನ.
- ಇಲಾಖಾ ಯೋಜನೆ ಮತ್ತು ಯೋಜನೇತರ ಅನುದಾನಗಳ ಬಿಡುಗಡೆ ಮತ್ತು ವೆಚ್ಚಕ್ಕೆ ಸಂಬಂಧಿಸಿದಂತೆ ಲೆಕ್ಕಪತ್ರಗಳ ನಿರ್ವಹಣೆ ಹಾಗೂ ಅಧೀನ ಕಛೇರಿಗಳಿಗೆ ಅನುದಾನದ ಹಂಚಿಕೆ.

10. **ಸಹಾಯಕ ನಿರ್ದೇಶಕರು (ಆಡಳಿತ) (ಗ್ರೂಪ್ ಬಿ ಶ್ರೇಣಿ –34 ಹುದ್ದೆಗಳು)**

(1) ಸಹಾಯಕ ನಿರ್ದೇಶಕರು – ಆಯುಕ್ತರ ಕಛೇರಿಯಲ್ಲಿ –3 ಹುದ್ದೆಗಳು

(2) ಸಹಾಯಕ ನಿರ್ದೇಶಕರು –ಜಿಲ್ಲಾಧಿಕಾರಿಗಳ ಭೂಮಾಪನ ಶಾಖೆಯಲ್ಲಿ –29 ಹುದ್ದೆಗಳು

(3) ಸಹಾಯಕ ನಿರ್ದೇಶಕರು – ಭೂದಾಖಲೆಗಳ ಜಂಟಿ ನಿರ್ದೇಶಕರ ಕಛೇರಿ, ನಗರಮಾಪನ, ದಕ್ಷಿಣ ವಲಯ, ಬೆಂಗಳೂರು ಮತ್ತು ಉತ್ತರ ವಲಯ, ಬೆಳಗಾಂ – 02 ಹುದ್ದೆಗಳು

1. **ಸಹಾಯಕ ನಿರ್ದೇಶಕರು – ಆಯುಕ್ತರ ಕಛೇರಿಯಲ್ಲಿ –3 ಹುದ್ದೆಗಳು**

ಈ ಮೂರು ಹುದ್ದೆಗಳಲ್ಲಿ ಒಂದು ಸಹಾಯಕ ನಿರ್ದೇಶಕರು (ಆಡಳಿತ) / (ಉಗ್ರಾಣ) / (ಲೆಕ್ಕ) ಶಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುತ್ತಾರೆ.

**1. ಸಹಾಯಕ ನಿರ್ದೇಶಕರು :–(ಆಡಳಿತ)**

- ಆಡಳಿತ ಶಾಖೆಯ ಮುಖ್ಯಸ್ಥರಾಗಿರುತ್ತಾರೆ.
- ಕ್ಲಿಷ್ಟಕರ ಆಡಳಿತ ವಿಷಯಗಳಲ್ಲಿ ವಿಷಯನಿರ್ವಾಹಕರಿಗೆ ಸಲಹೆ ಮತ್ತು ಮಾರ್ಗದರ್ಶನ.
- ಹಾಜರಾತಿ ನಿಯಂತ್ರಣ.
- ಉಪ ನಿರ್ದೇಶಕರು (ಆಡಳಿತ) ರವರು ಆಯುಕ್ತರಿಗೆ ಸಲ್ಲಿಸುವ ಪ್ರಕರಣಗಳನ್ನು ಪರಿಶೀಲಿಸಿ ಮಂಡಿಸುವುದು.

**2. ಸಹಾಯಕ ನಿರ್ದೇಶಕರು:– (ಉಗ್ರಾಣ) –**

- ಉಗ್ರಾಣ ಶಾಖೆಯ ಮುಖ್ಯಸ್ಥರಾಗಿರುತ್ತಾರೆ.
- ಕ್ಲಿಷ್ಟಕರ ವಿಷಯಗಳಲ್ಲಿ ವಿಷಯನಿರ್ವಾಹಕರಿಗೆ ಸಲಹೆ ಮತ್ತು ಮಾರ್ಗದರ್ಶನ.

- ಇಲಾಖೆಯ ಯೋಜನೆಗಳ ವೆಚ್ಚಕ್ಕೆ ಸಂಬಂಧಿಸಿದ ಕಡತಗಳ ನಿರ್ವಹಣೆ.
- ಇಲಾಖೆಗೆ ಅವಶ್ಯವಿರುವ ಪೀಠೋಪಕರಣ, ಲೇಖನ ಸಾಮಾಗ್ರಿ, ವಾಹನ ಖರೀದಿ ಮತ್ತು ರಿಪೇರಿ, ಕಛೇರಿ ಕಟ್ಟಡದ ಮೇಲ್ವಿಚಾರಣೆಗೆ ಸಂಬಂಧಿಸಿದಂತಹ ಕಡತಗಳನ್ನು ಪರಿಶೀಲಿಸುವುದು.
- ಲೆಕ್ಕಾಧಿಕಾರಿಗಳು ಆಯುಕ್ತರಿಗೆ ಸಲ್ಲಿಸುವ ಪ್ರಕರಣಗಳನ್ನು ಪರಿಶೀಲಿಸಿ ಮಂಡಿಸುವುದು.

**3. ಸಹಾಯಕ ನಿರ್ದೇಶಕರು:– (ಲೆಕ್ಕ)**

- ಲೆಕ್ಕ ಶಾಖೆಯ ಮುಖ್ಯಸ್ಥರಾಗಿರುತ್ತಾರೆ.
- ಇಲಾಖಾ ಯೋಜನೆ ಮತ್ತು ಲೆಕ್ಕ ವಿಷಯಗಳಿಗೆ ಸಂಬಂಧಿಸಿದ ಕಡತಗಳ ಪರಿಶೀಲನೆ.
- ಇಲಾಖೆಗೆ ಸಂಬಂಧಪಟ್ಟಂತಹ ವೇತನ ಬಟವಾಡೆ, ಸಾದಿಲ್ವಾರು ವೆಚ್ಚ, ವೇತನ ನಿಗದಿ, ನಿವೃತ್ತಿ ವೇತನ, ಜಿ.ಪಿ.ಎಫ್.ಮುಂಗಡ, ಹಬ್ಬದ ಮುಂಗಡ, ಪ್ರವಾಸ ಭತ್ಯೆ ಬಿಲ್ಲುಗಳು, ಎ.ಸಿ. ಮತ್ತು ಡಿ.ಸಿ. ಬಿಲ್ಲುಗಳು ಇತ್ಯಾದಿ.
- ವಾರ್ಷಿಕ ಬಜೆಟ್ ತಯಾರಿಕೆ (ಪ್ಲಾನ್ ಮತ್ತು ನಾನ್ ಪ್ಲಾನ್)
- ಕ್ಲಿಷ್ಟಕರ ವಿಷಯಗಳಲ್ಲಿ ಲೆಕ್ಕ ವಿಷಯಕ್ಕೆ ಸಂಬಂಧಿಸಿದಂತೆ ವಿಷಯನಿರ್ವಾಹಕರಿಗೆ ಹಾಗೂ ಸಂಬಂಧಪಟ್ಟ ಅಧೀಕ್ಷಕರುಗಳಿಗೆ ಸಲಹೆ ಮತ್ತು ಮಾರ್ಗದರ್ಶನ.
- ಇಲಾಖಾ ಯೋಜನೆ ಮತ್ತು ಯೋಜನೇತರ ಅನುದಾನಗಳ ಬಿಡುಗಡೆ ಮತ್ತು ವೆಚ್ಚಕ್ಕೆ ಸಂಬಂಧಿಸಿದಂತೆ ಲೆಕ್ಕಪತ್ರಗಳ ನಿರ್ವಹಣೆ ಹಾಗೂ ಅಧೀನ ಕಛೇರಿಗಳಿಗೆ ಅನುದಾನದ ಹಂಚಿಕೆ.

ಈ ಮೇಲ್ಕಂಡ ಅಂಶಗಳನ್ನು ಪರಿಶೀಲಿಸಿ, ಲೆಕ್ಕಾಧಿಕಾರಿಗಳಿಗೆ ಮಂಡಿಸುವುದು.

**2. ಸಹಾಯಕ ನಿರ್ದೇಶಕರು :–ಜಿಲ್ಲಾಧಿಕಾರಿಗಳ ಭೂಮಾಪನ ಶಾಖೆಯಲ್ಲಿ –29 ಹುದ್ದೆಗಳು**

- ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಸಹಾಯಕ ನಿರ್ದೇಶಕರಿಗೆ ಆಡಳಿತ ವಿಷಯಕ್ಕೆ ಸಂಬಂಧಿಸಿದಂತೆ ಸಹಕರಿಸುವುದು.
- ಜಿಲ್ಲಾ ವ್ಯಾಪ್ತಿಯಲ್ಲಿನ ಭೂಮಾಪನ ಅಧಿಕಾರಿ / ಸಿಬ್ಬಂದಿಗಳ ಸೇವಾ ವಿಷಯಗಳಾದ 10 / 15 / 20 / 30 ವರ್ಷಗಳ ಕಾಲಮಿತಿ ಪದೋನ್ನತಿಗಳ ಮಂಜೂರಾತಿ, ರಜೆ ಮಂಜೂರಾತಿ, ಶಿಸ್ತು ಕಡತಗಳ ನಿರ್ವಹಣೆ, ಆಸ್ತಿ ಮತ್ತು ಋಣ ತ:ಖ್ತೆ,ವಾರ್ಷಿಕ ಕಾರ್ಯ ನಿರ್ವಹಣಾ ವರದಿಗಳ ನಿರ್ವಹಿಸುವುದು.
- ಆಡಳಿತ ವಿಷಯಕ್ಕೆ ಸಂಬಂಧಿಸಿದಂತೆ ಕೇಂದ್ರ ಕಛೇರಿಯಿಂದ ಕೋರಲಾದ ಸೇವಾ ವಿಷಯಗಳ ಮಾಹಿತಿಯನ್ನು ಸಂಬಂದಪಟ್ಟ ಜಿಲ್ಲಾಧಿಕಾರಿಗಳ ಮುಖಾಂತರ ಸಲ್ಲಿಸುವುದು.

**3. ಸಹಾಯಕ ನಿರ್ದೇಶಕರು :– ಭೂದಾಖಲೆಗಳ ಜಂಟಿ ನಿರ್ದೇಶಕರ ಕಛೇರಿ, ನಗರಮಾಪನ, ದಕ್ಷಿಣ ವಲಯ, ಬೆಂಗಳೂರು ಮತ್ತು ಉತ್ತರ ವಲಯ, ಬೆಳಗಾಂ – 02 ಹುದ್ದೆಗಳು**

- ಭೂದಾಖಲೆಗಳ ಜಂಟಿ ನಿರ್ದೇಶಕರಿಗೆ ಆಡಳಿತ ವಿಷಯಕ್ಕೆ ಸಂಬಂಧಿಸಿದಂತೆ ಸಹಕರಿಸುವುದು.
- ಜಿಲ್ಲಾ ವ್ಯಾಪ್ತಿಯಲ್ಲಿನ ಭೂಮಾಪನ ಅಧಿಕಾರಿ / ಸಿಬ್ಬಂದಿಗಳ ಸೇವಾ ವಿಷಯಗಳಾದ 10 / 15 / 20 / 30 ವರ್ಷಗಳ ಕಾಲಮಿತಿ ಪದೋನ್ನತಿಗಳ ಮಂಜೂರಾತಿ, ರಜೆ ಮಂಜೂರಾತಿ, ಶಿಸ್ತು ಕಡತಗಳ ನಿರ್ವಹಣೆ, ಆಸ್ತಿ ಮತ್ತು ಋಣ ತ:ಖ್ತೆ,ವಾರ್ಷಿಕ ಕಾರ್ಯ ನಿರ್ವಹಣಾ ವರದಿಗಳ ನಿರ್ವಹಿಸುವುದು.
- ಆಡಳಿತ ವಿಷಯಕ್ಕೆ ಸಂಬಂಧಿಸಿದಂತೆ ಕೇಂದ್ರ ಕಛೇರಿಯಿಂದ ಕೋರಲಾದ ಸೇವಾ ವಿಷಯಗಳ ಮಾಹಿತಿಯನ್ನು ಸಂಬಂದಪಟ್ಟ ಭೂದಾಖಲೆಗಳ ಜಂಟಿ ನಿರ್ದೇಶಕರ ಮುಖಾಂತರ ಸಲ್ಲಿಸುವುದು.

11. **ಲೆಕ್ಕಾಧೀಕ್ಷಕರು :–** (ರಾಜ್ಯ ಲೆಕ್ಕ ನಿಯಂತ್ರಣ ಇಲಾಖೆಯಿಂದ ನಿಯೋಜನೆ)

- ಇಲಾಖಾ ಯೋಜನೆ ಮತ್ತು ಲೆಕ್ಕ ವಿಷಯಗಳಿಗೆ ಸಂಬಂಧಿಸಿದ ಕಡತಗಳ ಪರಿಶೀಲನೆ.
- ಇಲಾಖೆಗೆ ಸಂಬಂಧಪಟ್ಟಂತಹ ವೇತನ ಬಟವಾಡೆ, ಸಾದಿಲ್ವಾರು ವೆಚ್ಚ, ವೇತನ ನಿಗದಿ, ನಿವೃತ್ತಿ ವೇತನ, ಜಿ.ಪಿ.ಎಫ್.ಮುಂಗಡ, ಹಬ್ಬದ ಮುಂಗಡ, ಪ್ರವಾಸ ಭತ್ಯೆ ಬಿಲ್ಲುಗಳು, ಎ.ಸಿ. ಮತ್ತು ಡಿ.ಸಿ. ಬಿಲ್ಲುಗಳ ಪರಿಶೀಲನೆ.
- ವಾರ್ಷಿಕ ಬಜೆಟ್ ತಯಾರಿಕೆ (ಪ್ಲಾನ್ ಮತ್ತು ನಾನ್ ಪ್ಲಾನ್) ಪರಿಶೀಲನೆ.
- ಕ್ಲಿಷ್ಟಕರ ವಿಷಯಗಳಲ್ಲಿ ಲೆಕ್ಕ ವಿಷಯಕ್ಕೆ ಸಂಬಂಧಿಸಿದಂತೆ ವಿಷಯನಿರ್ವಾಹಕರಿಗೆ ಸಲಹೆ ಮತ್ತು ಮಾರ್ಗದರ್ಶನ.
- ಇಲಾಖಾ ಯೋಜನೆ ಮತ್ತು ಯೋಜನೇತರ ಅನುದಾನಗಳ ಬಿಡುಗಡೆ ಮತ್ತು ವೆಚ್ಚಕ್ಕೆ ಸಂಬಂಧಿಸಿದಂತೆ ಲೆಕ್ಕಪತ್ರಗಳ ನಿರ್ವಹಣೆ ಹಾಗೂ ಅಧೀನ ಕಛೇರಿಗಳಿಗೆ ಅನುದಾನದ ಹಂಚಿಕೆ ಕಡತಗಳ ಪರಿಶೀಲನೆ.

ಈ ಮೇಲ್ಕಂಡ ಅಂಶಗಳನ್ನು ಪರಿಶೀಲಿಸಿ, ಲೆಕ್ಕಾಧಿಕಾರಿಗಳಿಗೆ ಮಂಡಿಸುವುದು.

**12. ಅಧೀಕ್ಷಕರು (ಆಡಳಿತ) :–**

- ವಿವಿಧ ವಿಷಯಗಳು ಹಂಚಿಕೆಯಾಗಿರುವ ವಿಷಯನಿರ್ವಾಹಕರುಗಳಿಂದ ಕಡತಗಳ ಮಂಡನೆಯ ನಂತರ ನಿಯಮದ ಪ್ರಕಾರ ಸೂಕ್ತ ಪರಿಶೀಲನೆ ಮಾಡಿ, ಉನ್ನತಾಧಿಕಾರಿಗಳಿಗೆ ಮಂಡಿಸುವುದು.
- ವಿಷಯನಿರ್ವಾಹಕರ ಕೆಲಸ–ಕಾರ್ಯಗಳ ಬಗ್ಗೆ ಸಲಹೆ ಮತ್ತು ಮಾರ್ಗದರ್ಶನ ನೀಡುವುದು ಹಾಗೂ ನಿಯಂತ್ರಿಸುವುದು.
- ಉನ್ನತಾಧಿಕಾರಿಗಳು ವಹಿಸುವ ಇತರೆ ಯಾವುದೇ ಕೆಲಸಗಳನ್ನು ಜವಾಬ್ದಾರಿಯಿಂದ ನಿರ್ವಹಿಸುವುದು.

**13. ಪ್ರಥಮ ದರ್ಜೆ ಸಹಾಯಕರು / ದ್ವಿತೀಯ ದರ್ಜೆ ಸಹಾಯಕರು:–**

- ಇವರುಗಳು ಮೂಲತ: ವಿವಿಧ ವಿಷಯಗಳ ನಿರ್ವಹಣೆಯ ಜವಾಬ್ದಾರಿ ಹೊಂದಿರುತ್ತಾರೆ.
- ಹಂಚಲಾದ ವಿಷಯಗಳ ಬಗ್ಗೆ ಪತ್ರಗಳನ್ನು ಸ್ವೀಕರಿಸಿ ನಿಯಮಾನುಸಾರ ಪರಿಶೀಲಿಸಿ, ಮುಂದಿನ ಅಗತ್ಯ ಕ್ರಮದ ಬಗ್ಗೆ ಕಡತವನ್ನು ಅಧೀಕ್ಷಕರುಗಳಿಗೆ ಮಂಡಿಸುವುದು.
- ಅವರು ನಿರ್ವಹಿಸುವ ಕೆಲಸ–ಕಾರ್ಯಗಳ ಬಗ್ಗೆ ಮಾಹೆಯಾನ ಅಂಕಿ–ಅಂಶಗಳನ್ನು ನಿರ್ವಹಿಸಿ ಉನ್ನತಾಧಿಕಾರಿಗಳಿಗೆ ಮಂಡಿಸುವುದು ಹಾಗೂ ನಿಯತಕಾಲಿಕೆಗಳನ್ನು ತಯಾರಿಸುವುದು.
- ಕಛೇರಿ ಕೈಪಿಡಿಯಲ್ಲಿ ತಿಳಿಸಿರುವ ವಿಧಾನಗಳನ್ನು ಆಧರಿಸಿ ಕಡತ / ಕೆಲಸ ನಿರ್ವಹಿಸುವುದು.
- ಕಛೇರಿ / ಸಾರ್ವಜನಿಕ ಪತ್ರಗಳ ಸ್ವೀಕೃತಿ ಮತ್ತು ರವಾನೆ

**14. ಬೆರಳಚ್ಚುಗಾರರು :–**

- ಕಛೇರಿಯ ಬೆರಳಚ್ಚು ಕೆಲಸಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸುವುದು.
- ಬೆರಳಚ್ಚುಗಾರರಿಗೆ ನಿಗದಿಪಡಿಸಿದ ನಿಯತಕಾಲಿಕೆಯನ್ನು ನಿರ್ವಹಿಸಿ, ಉನ್ನತಾಧಿಕಾರಿಗಳಿಗೆ ಮಂಡಿಸುವುದು.

**15. ಗ್ರೂಪ್ ಡಿ ಸಿಬ್ಬಂದಿ:–**

**ದಫ್ತರ್‌ಬಂದ್:–**

ಕಛೇರಿಯ ಮೂಲ ಕಡತ ಶಾಖೆ / ಅಭಿಲೇಖಾಲಯದಲ್ಲಿ ವಿಷಯ ನಿರ್ವಾಹಕರಿಗೆ ಕಡತಗಳನ್ನು ಒದಗಿಸುವುದು ಹಾಗೂ ಕಡತಗಳನ್ನು ಹೊಲೆದು ಸಂರಕ್ಷಿಸುವುದು.

**ಕಛೇರಿ ಜವಾನರು:** ಆಯಾ ಕಛೇರಿಯಲ್ಲಿನ ದೈನಂದಿನ ಕೆಲಸಗಳಲ್ಲಿ ವಿಷಯನಿರ್ವಾಹಕರ ಮೇಲ್ಪಟ್ಟು ಎಲ್ಲಾ ಅಧಿಕಾರಿ / ನೌಕರರುಗಳಿಗೆ ಸಂಬಂಧಪಟ್ಟ ಕಡತಗಳ ನಿರ್ವಹಣೆಯಲ್ಲಿ ಭೌತಿಕವಾಗಿ ಸಹಕರಿಸುವುದು. ಮತ್ತು ಕಛೇರಿಯ ಸ್ವಚ್ಛತೆ ಕಾಪಾಡುವುದು.

**ಬಾಂದು ಜವಾನರು:** ಇಲಾಖಾ ಕಾರ್ಯನಿರ್ವಾಹಕ ಅಧಿಕಾರಿ / ನೌಕರರುಗಳಿಗೆ ಅಡವಿ ಕೆಲಸ ನಿರ್ವಹಣೆಯಲ್ಲಿ ಅವಶ್ಯವಿರುವ ಸಲಕರಣೆಗಳನ್ನು ಸಾಗಿಸುವುದು ಹಾಗೂ ಅಳತೆಗೆ ಸಂಬಂಧಿಸಿದಂತೆ ಅರ್ಜಿದಾರರಿಗೆ ಮುದ್ದಾಂ ನೋಟೀಸ್ ಜಾರಿಗೊಳಿಸುವುದು.

**16. ನಕಾಶೆ ಶಾಖೆ ( ಈ ಶಾಖೆ ಕೇಂದ್ರ ಕಛೇರಿಯಲ್ಲಿ ಮಾತ್ರ ಇರುತ್ತದೆ)**

**ಅಧೀಕ್ಷಕರು (ನಕಾಶೆ) :**

- ನಕಾಶೆ ತಯಾರಿಕೆ ಶಾಖೆಯ ಮುಖ್ಯಸ್ಥರಾಗಿರುತ್ತಾರೆ.
- ಡ್ರಾಫ್ಟ್‌ಮನ್ ತಯಾರಿಸುವ ಗ್ರಾಮ / ತಾಲ್ಲೂಕು / ಜಿಲ್ಲೆಗಳಿಗೆ ಸಂಬಂಧಿಸಿದ ಭೂಮಾಪನ ನಕಾಶೆಗಳ ತಯಾರಿಕೆ / ಇಂಡೀಕರಣದ ಮೇಲ್ವಿಚಾರಣೆ.

**ತಪಾಸಕರು (ನಕಾಶೆ):**

- ಡ್ರಾಫ್ಟ್‌ಮನ್ ತಯಾರಿಸುವ ಗ್ರಾಮ / ತಾಲ್ಲೂಕು / ಜಿಲ್ಲೆಗಳಿಗೆ ಸಂಬಂಧಿಸಿದ ಭೂಮಾಪನ ನಕಾಶೆಗಳ ತಯಾರಿಕೆ / ಇಂಡೀಕರಣದ ಮೇಲ್ವಿಚಾರಣೆ.
- ಕೇಂದ್ರ ಕಛೇರಿಯ ಮುದ್ರಣಾಲಯದ ಮೇಲ್ವಿಚಾರಣೆ.

**ಡ್ರಾಫ್ಟ್‌ಮನ್:**

- ಗ್ರಾಮ / ತಾಲ್ಲೂಕು / ಜಿಲ್ಲೆಗಳಿಗೆ ಸಂಬಂಧಿಸಿದ ಭೂಮಾಪನ ನಕಾಶೆಗಳ ತಯಾರಿಕೆ / ಇಂಡೀಕರಣ.

**ಮಾಹಿತಿ ಹಕ್ಕು ಅಧಿನಿಯಮ 4 (1) (b) (ii) ಅಧಿಕಾರಿಗಳು / ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು ಶಾಸನಬದ್ಧ ಅಧಿಕಾರಗಳು**

1. **ಆಯುಕ್ತರು / ನಿರ್ದೇಶಕರು:–**

   - ಗ್ರೂಪ್ ಬಿ, ಸಿ ಮತ್ತು ಡಿ ವೃಂದದ ಎಲ್ಲಾ ಅಧಿಕಾರಿ / ಸಿಬ್ಬಂದಿಗಳ ನಿಯಮದನ್ವಯ ನೇಮಕಾತಿ / ಪದೋನ್ನತಿ ನೀಡುವ ಅಧಿಕಾರ.
   - ಕೆ.ಸಿ.ಎಸ್. (ಸಿ.ಸಿ.ಎ.) ನಿಯಮ 1957 ರ ಪ್ರಕಾರ ಗ್ರೂಪ್ ಬಿ, ಸಿ ಮತ್ತು ಡಿ ವೃಂದದ ಶಿಸ್ತು ಪ್ರಾಧಿಕಾರಿಯಾಗಿದ್ದು, ಲಘು ಹಾಗೂ ಕಠಿಣ ದಂಡನೆಗಳನ್ನು ವಿಧಿಸುವ ಅಧಿಕಾರ.
   - ಇಲಾಖಾ ತಾಂತ್ರಿಕ ಮತ್ತು ಆಡಳಿತ ವಿಷಯಗಳಿಗೆ ಸಂಬಂಧಿಸಿದಂತೆ ಮಾರ್ಗಸೂಚಿಗಳನ್ನು ಸುತ್ತೋಲೆಯ ಮುಖಾಂತರ ನೀಡುವ ಅಧಿಕಾರ.
   - ಸರ್ಕಾರಿ ಅದೇಶ ಸಂ: ಎಫ್‌ಡಿ 2 ಟಿಎಫ್‌ಪಿ 2010 ದಿನಾಂಕ: 30.04.2010 ರ ಪ್ರಕಾರ ಇಲಾಖಾ ಮುಖ್ಯಸ್ಥರಿಗೆ ಪ್ರತ್ಯಾಯೋಜಿಸಲಾದ ಆರ್ಥಿಕ ಅಧಿಕಾರವನ್ನು ಚಲಾಯಿಸುವ ಅಧಿಕಾರ.

- ಕರ್ನಾಟಕ ಭೂಕಂದಾಯ ನಿಯಮಾವಳಿ 1966ರ ನಿಯಮ 46(ಸಿ) ರಲ್ಲಿ ವಿವರಿಸಿರುವಂತೆ ಅರ್ಹ ಅಭ್ಯರ್ಥಿಗಳಿಗೆ ಪರವಾನಗಿಯನ್ನು ನೀಡುವಂತಹ ಅಧಿಕಾರ ಮತ್ತು 46(ಕೆ) ಪ್ರಕಾರ ಪರವಾನಗಿ ರದ್ದುಪಡಿಸುವ ಅಧಿಕಾರ.
- ಮಾಹಿತಿ ಹಕ್ಕು ಅಧಿನಿಯಮ 2005ರ ಅಧಿನಿಯಮದಡಿಯಲ್ಲಿ ರಾಜ್ಯ ಸಾರ್ವಜನಿಕ ಮಾಹಿತಿ ಅಧಿಕಾರಿಗಳು ಹಾಗೂ ಅಧಿನಿಯಮ 19(1) ರ ಪ್ರಕಾರ ಇಲಾಖಾ ಸಾರ್ವಜನಿಕ ಮಾಹಿತಿ ಅಧಿಕಾರಿಗಳು ನೀಡಿದ ಮಾಹಿತಿ ಮೇಲೆ ಮೊದಲನೇ ಮೇಲ್ಮನವಿ ಪ್ರಾಧಿಕಾರ.

**2. ಭೂದಾಖಲೆಗಳ ಜಂಟಿ ನಿರ್ದೇಶಕರು (ನಗರಮಾಪನ):–**

- ಕರ್ನಾಟಕ ಭೂಕಂದಾಯ ಅಧಿನಿಯಮ 1964 ರ ಕಲಂ 56 ರ ಅಡಿಯಲ್ಲಿ ನಗರಮಾಪನ ವ್ಯಾಪ್ತಿಗೆ ಒಳಪಟ್ಟಂತಹ ನಗರಾಸ್ತಿಗಳಿಗೆ ಸಂಬಂಧಪಟ್ಟಂತೆ ರಿವಿಜನ್ ಪ್ರಕರಣಗಳನ್ನು ಇತ್ಯರ್ಥಪಡಿಸುವ ಅಧಿಕಾರ.
- ಕರ್ನಾಟಕ ಭೂಕಂದಾಯ ಅಧಿನಿಯಮ 1964ರ ಕಲಂ 140(2)ರಡಿಯಲ್ಲಿ ಸರ್ವೆ ನಂಬರುಗಳ ಗಡಿ ತಿದ್ದುಪಡಿ ಮಾಡುವ ಅಧಿಕಾರ.
- ಕರ್ನಾಟಕ ಭೂಕಂದಾಯ ಅಧಿನಿಯಮ 1964 ರ ಕಲಂ 136(3) ರಡಿಯಲ್ಲಿ ಹಕ್ಕು ಬದಲಾವಣೆಗೆ ಸಂಬಂಧಿಸಿದ ಮೇಲ್ಮನವಿಗಳನ್ನು ಇತ್ಯರ್ಥಪಡಿಸುವ ಅಧಿಕಾರ.
- ಕರ್ನಾಟಕ ಭೂಕಂದಾಯ ಅಧಿನಿಯಮ 1964 ರ ಕಲಂ 148 ರಡಿಯಲ್ಲಿ ನಗರಮಾಪನ ವ್ಯಾಪ್ತಿಗೆ ಸಂಬಂಧಿಸಿದಂತೆ ಗ್ರಾಮ / ನಗರ / ಪಟ್ಟಣಗಳ ಎಲ್ಲೆಯನ್ನು ನಿಗದಿಪಡಿಸುವ ಅಧಿಕಾರ.
- ಕರ್ನಾಟಕ ಭೂಕಂದಾಯ ಅಧಿನಿಯಮ 1964 ರ ಕಲಂ 153 (1) ಹಾಗೂ ಸಂಬಂಧಿಸಿದ ನಿಯಮ 85 ರ ಅಡಿಯಲ್ಲಿ ನಗರಮಾಪನ ವ್ಯಾಪ್ತಿಗೆ ಸೇರಿದ ಆಸ್ತಿಗಳ ಬಗ್ಗೆ ಸನ್ನದು ಶುಲ್ಕವನ್ನು ನಿಗದಿಪಡಿಸುವ ಅಧಿಕಾರ.
- ಕರ್ನಾಟಕ ಭೂಕಂದಾಯ ನಿಯಮಾವಳಿ 1966 ರ ನಿಯಮ 91(1) ರಡಿಯಲ್ಲಿ ಆಸ್ತಿ ಪ್ರಕಟಣ ಪತ್ರಗಳ (ಪಿ.ಆರ್. ಕಾರ್ಡ್‌ಗಳು) ಮರು ಬರವಣಿಗೆ ಬಗ್ಗೆ ನಿರ್ದೇಶನ ನೀಡುವ ಅಧಿಕಾರ.
- ಕರ್ನಾಟಕ ಭೂಕಂದಾಯ ನಿಯಮಾವಳಿ 1966 ರ ನಿಯಮ 91(2) ರಡಿಯಲ್ಲಿ ಆಸ್ತಿ ಪ್ರಕಟಣ ಪತ್ರಗಳಲ್ಲಿ (ಪಿ.ಆರ್. ಕಾರ್ಡ್‌ಗಳು) ದಾಖಲ್ಮಾಡಿರುವ ಅಂಶಗಳನ್ನು ಪರಿಶೀಲಿಸುವ ಅಧಿಕಾರ.
- ಇಲಾಖೆಯ ಗ್ರೂಪ್ ಸಿ ಮತ್ತು ಡಿ ನೌಕರರುಗಳನ್ನು ಕೆ.ಸಿ.ಎಸ್.(ಸಿಸಿಎ) 1957 ರನ್ವಯ ಅಮಾನತ್ತಿನಲ್ಲಿರಿಸುವ ಅಧಿಕಾರ ಮತ್ತು ಪ್ರಥಮ ದರ್ಜೆ ಸಹಾಯಕರ ಹುದ್ದೆಯ ಹಂತದವರೆಗೆ ಶಿಸ್ತು ನಡವಳಿಯನ್ನು ಆರಂಭಿಸಿ, ಕೆ.ಸಿ.ಎಸ್. (ಸಿಸಿಎ) ನಿಯಮ 8 ರನ್ವಯ ಲಘು ದಂಡನೆಯನ್ನು ವಿಧಿಸುವ ಅಧಿಕಾರ.
- ಸರ್ಕಾರಿ ಆದೇಶ ಸಂ: ಎಫ್‌ಡಿ 2 ಟಿಎಫ್‌ಪಿ 2010 ದಿನಾಂಕ: 30.04.2010 ರ ಪ್ರಕಾರ ವಿಭಾಗ ಮಟ್ಟದ ಅಧಿಕಾರಿಗಳಿಗೆ ಪ್ರತ್ಯಾಯೋಜಿಸಲಾದ ಆರ್ಥಿಕ ಅಧಿಕಾರವನ್ನು ಚಲಾಯಿಸುವ ಅಧಿಕಾರ.

**3. ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರು :–**

- ಕರ್ನಾಟಕ ಭೂಕಂದಾಯ ಅಧಿನಿಯಮ 1964 ರ ಕಲಂ 49 (ಎ)ರ ಅಡಿಯಲ್ಲಿ 1ನೇ ಮೇಲ್ಮನವಿ ಪ್ರಕರಣಗಳನ್ನು ಇತ್ಯರ್ಥಪಡಿಸುವ ಅಧಿಕಾರ.
- ಕರ್ನಾಟಕ ಭೂಕಂದಾಯ ನಿಯಮಾವಳಿ 1966 ರ ನಿಯಮ 139 (2) ರ ಅಡಿಯಲ್ಲಿ ಹದ್ದುಬಸ್ತು 2ನೇ ಮೇಲ್ಮನವಿಯನ್ನು ಇತ್ಯರ್ಥಪಡಿಸುವ ಅಧಿಕಾರ.
- ಕರ್ನಾಟಕ ಭೂಕಂದಾಯ ನಿಯಮಾವಳಿ 1966 ರ ನಿಯಮ 36 (1) ರ ಅಡಿಯಲ್ಲಿ ಮೋಜಣಿ ತಪ್ಪಿ ಗೆ ಇತ್ಯರ್ಥಪಡಿಸುವ ಅಧಿಕಾರ.
- ಕರ್ನಾಟಕ ಭೂಕಂದಾಯ ನಿಯಮಾವಳಿ 1966 ರ ನಿಯಮ 36 (ii) ರ ಅಡಿಯಲ್ಲಿ ದುರಸ್ತಾದ ಪ್ರಕರಣಗಳನ್ನು ಮೇಲು ಸಹಿ ಮಾಡುವ ಅಧಿಕಾರ. (ಮ್ಯುಟೇಶನ್ ಪ್ರಕರಣಗಳನ್ನು ಹೊರತುಪಡಿಸಿ)
- ಕರ್ನಾಟಕ ಭೂಕಂದಾಯ ಅಧಿನಿಯಮ 1964 ರ ಕಲಂ 67(2), (ಸರ್ಕಾರಿ ಜಮೀನನ್ನು ಪರಿಶೀಲಿಸಿ, ಕಾನೂನು ಕ್ರಮ ಕೈಗೊಳ್ಳುವುದು) 136(2)(ಹಕ್ಕು ಬದಲಾವಣೆಗೆ ಸಂಬಂಧಪಟ್ಟ ಮೇಲ್ಮನವಿ), ಕರ್ನಾಟಕ ಭೂಕಂದಾಯ ನಿಯಮಾವಳಿ 1966ರ ನಿಯಮ 36(1) (ಮೋಜಣಿ ತಪ್ಪಿನ ಪ್ರಕರಣಗಳ ಬಗ್ಗೆ ತಿದ್ದುಪಡಿ ಆದೇಶ), 83(ನಗರಾಸ್ಥಿಗಳ ಬಗ್ಗೆ ವಿಚಾರಣೆ ಮಾಡಿ ಹಕ್ಕು ದಾಖಲ್ಮಾಡುವುದು) 91(2) (ಮರು ಬರವಣಿಗೆ ಮಾಡಲ್ಪಟ್ಟ ಆಸ್ತಿ ಪ್ರಕಟಣಾ ಪತ್ರಗಳಲ್ಲಿನ ದಾಖಲೆಗಳಲ್ಲಿನ ಅಂಶಗಳನ್ನು ಪರಿಶೀಲಿಸುವುದು), 139(2) (ಹದ್ದುಬಸ್ತು 2ನೇ ಮೇಲ್ಮನವಿ)ಅಡಿಯಲ್ಲಿ ಇರುವ ಶಾಸನಬದ್ಧ ಅಧಿಕಾರಗಳನ್ನು ಸಂಬಂಧಪಟ್ಟ ಜಿಲ್ಲಾ ವ್ಯಾಪ್ತಿಯಲ್ಲಿನ ನಗರಮಾಪನಕ್ಕೆ ಸೀಮಿತಗೊಳಿಸಿ ಅಧಿಕಾರವನ್ನು ಚಲಾಯಿಸುವುದು.

- ಜಿಲ್ಲಾಧಿಕಾರಿಗಳ ವ್ಯಾಪ್ತಿಯಲ್ಲಿನ ಭೂಮಾಪನ ಇಲಾಖೆಯ ಗ್ರೂಪ್ ಸಿ ಮತ್ತು ಡಿ ನೌಕರರುಗಳನ್ನು ಕೆ.ಸಿ.ಎಸ್.(ಸಿಸಿಎ) 1957 ರನ್ವಯ ಅಮಾನತ್ತಿನಲ್ಲಿರಿಸುವ ಅಧಿಕಾರ ಮತ್ತು ಪ್ರಥಮ ದರ್ಜೆ ಸಹಾಯಕರ ಹುದ್ದೆಯ ಹಂತದವರೆಗೆ ಶಿಸ್ತು ನಡವಳಿಯನ್ನು ಆರಂಭಿಸಿ, ಕೆ.ಸಿ.ಎಸ್. (ಸಿಸಿಎ) ನಿಯಮ 8 ರನ್ವಯ ಲಘು ದಂಡನೆಯನ್ನು ವಿಧಿಸುವ ಅಧಿಕಾರ.

4. **ಭೂದಾಖಲೆಗಳ ಉಪ ನಿರ್ದೇಶಕರು, ನಗರಮಾಪನ, ಬೆಂಗಳೂರು:–**

- ಕರ್ನಾಟಕ ಭೂಕಂದಾಯ ಅಧಿನಿಯಮ 1964 ರ ಕಲಂ 136(2)(ಹಕ್ಕು ಬದಲಾವಣೆಗೆ ಸಂಬಂಧಪಟ್ಟ ಮೇಲ್ಮನವಿ) ಕರ್ನಾಟಕ ಭೂಕಂದಾಯ ನಿಯಮಾವಳಿ 1966 ರ ನಿಯಮ 36 (1), (ಮೋಜಣಿ ತಪ್ಪಿನ ಪ್ರಕರಣಗಳ ಬಗ್ಗೆ ತಿದ್ದುಪಡಿ ಆದೇಶ) 91(2) (ಮರು ಬರವಣಿಗೆ ಮಾಡಲ್ಪಟ್ಟ ಆಸ್ತಿ ಪ್ರಕಟಣಾ ಪತ್ರಗಳಲ್ಲಿನ ದಾಖಲೆಗಳಲ್ಲಿನ ಅಂಶಗಳನ್ನು ಪರಿಶೀಲಿಸುವುದು) 139(2) (ಹದ್ದುಬಸ್ತು 2ನೇ ಮೇಲ್ಮನವಿ) ಶಾಸನಬದ್ಧ ಅಧಿಕಾರಗಳನ್ನು ಸಂಬಂಧಪಟ್ಟ ಜಿಲ್ಲಾ ವ್ಯಾಪ್ತಿಯಲ್ಲಿನ ನಗರಮಾಪನಕ್ಕೆ ಸೀಮಿತಗೊಳಿಸಿ ಅಧಿಕಾರವನ್ನು ಚಲಾಯಿಸುವುದು.
- ಜಿಲ್ಲಾಧಿಕಾರಿಗಳ ವ್ಯಾಪ್ತಿಯಲ್ಲಿನ ಭೂಮಾಪನ ಇಲಾಖೆಯ ಗ್ರೂಪ್ ಸಿ ಮತ್ತು ಡಿ ನೌಕರರುಗಳನ್ನು ಕೆ.ಸಿ.ಎಸ್.(ಸಿಸಿಎ) 1957 ರನ್ವಯ ಅಮಾನತ್ತಿನಲ್ಲಿರಿಸುವ ಅಧಿಕಾರ ಮತ್ತು ಪ್ರಥಮ ದರ್ಜೆ ಸಹಾಯಕರ ಹುದ್ದೆಯ ಹಂತದವರೆಗೆ ಶಿಸ್ತು ನಡವಳಿಯನ್ನು ಆರಂಭಿಸಿ, ಕೆ.ಸಿ.ಎಸ್. (ಸಿಸಿಎ) ನಿಯಮ 8 ರನ್ವಯ ಲಘು ದಂಡನೆಯನ್ನು ವಿಧಿಸುವ ಅಧಿಕಾರ.
- ಸರ್ಕಾರಿ ಅದೇಶ ಸಂ: ಎಫ್‌ಡಿ 2 ಟಿಎಫ್‌ಪಿ 2010 ದಿನಾಂಕ: 30.04.2010 ರ ಪ್ರಕಾರ ಜಿಲ್ಲಾ ಮಟ್ಟದ ಅಧಿಕಾರಿಗಳಿಗೆ ಪ್ರತ್ಯಾಯೋಜಿಸಲಾದ ಆರ್ಥಿಕ ಅಧಿಕಾರವನ್ನು ಚಲಾಯಿಸುವ ಅಧಿಕಾರ.

5. **ವಿಚಾರಣಾಧಿಕಾರಿಗಳು, ನಗರಮಾಪನ ತಂಡ–1,2 ಮತ್ತು 3, ಬೆಂಗಳೂರು:–**

- ಕರ್ನಾಟಕ ಭೂಕಂದಾಯ ಅಧಿನಿಯಮ 1964 ರ ಕಲಂ 67(2) ರ ಅನ್ವಯ ಸರ್ಕಾರಿ ಜಮೀನಿನ ಬಗ್ಗೆ ಪರಿಶೀಲಿಸಿ ಸೂಕ್ತ ಕ್ರಮ ಕೈಗೊಳ್ಳುವುದು.
- ಕರ್ನಾಟಕ ಭೂಕಂದಾಯ ನಿಯಮಾವಳಿ 1966 ರ ನಿಯಮ 83 ರ ಅಡಿಯಲ್ಲಿ ನಗರ ಆಸ್ತಿಗಳಿಗೆ ಸಂಬಂಧಪಟ್ಟಂತೆ ವಿಚಾರಣೆ ಕ್ರಮ ಕೈಗೊಂಡು ನಗರಮಾಪನ ದಾಖಲೆಗಳಲ್ಲಿ ಹಕ್ಕು ದಾಖಲ್ಮಾಡುವ ಅಧಿಕಾರ.
- ಜಿಲ್ಲಾಧಿಕಾರಿಗಳ ವ್ಯಾಪ್ತಿಯಲ್ಲಿನ ಭೂಮಾಪನ ಇಲಾಖೆಯ ಗ್ರೂಪ್ ಸಿ ಮತ್ತು ಡಿ ನೌಕರರುಗಳನ್ನು ಕೆ.ಸಿ.ಎಸ್.(ಸಿಸಿಎ) 1957 ರನ್ವಯ ಅಮಾನತ್ತಿನಲ್ಲಿರಿಸುವ ಅಧಿಕಾರ ಮತ್ತು ಪ್ರಥಮ ದರ್ಜೆ ಸಹಾಯಕರ ಹುದ್ದೆಯ ಹಂತದವರೆಗೆ ಶಿಸ್ತು ನಡವಳಿಯನ್ನು ಆರಂಭಿಸಿ, ಕೆ.ಸಿ.ಎಸ್. (ಸಿಸಿಎ) ನಿಯಮ 8 ರನ್ವಯ ಲಘು ದಂಡನೆಯನ್ನು ವಿಧಿಸುವ ಅಧಿಕಾರ.
- ಸರ್ಕಾರಿ ಅದೇಶ ಸಂ: ಎಫ್‌ಡಿ 2 ಟಿಎಫ್‌ಪಿ 2010 ದಿನಾಂಕ: 30.04.2010 ರ ಪ್ರಕಾರ ಜಿಲ್ಲಾ ಮಟ್ಟದ ಅಧಿಕಾರಿಗಳಿಗೆ ಪ್ರತ್ಯಾಯೋಜಿಸಲಾದ ಆರ್ಥಿಕ ಅಧಿಕಾರವನ್ನು ಚಲಾಯಿಸುವ ಅಧಿಕಾರ.

6. **ಭೂದಾಖಲೆಗಳ ಸಹಾಯಕ ನಿರ್ದೇಶಕರು (ಕಾ.ನಿ):–**

- ಕರ್ನಾಟಕ ಭೂಕಂದಾಯ ನಿಯಮಾವಳಿ 1966 ರ ನಿಯಮ 139(1)(ಮೊದಲನೇ ಹದ್ದುಬಸ್ತು ಮೇಲ್ಮನವಿ) 36(2) (ಮ್ಯುಟೇಶನ್ ಪ್ರಕರಣಗಳಿಗೆ ಸಂಬಂಧಿಸಿದಂತೆ ಆಕಾರಬಂದು ದುರಸ್ತಿಪಡಿಸುವುದು)

**ಷರಾ:–** ಸರ್ಕಾರಿ ಆದೇಶ ಸಂಖ್ಯೆ: ಕಂಇ 20 ಭೂದಾಸ 2002, ದಿನಾಂಕ 21.4.2005 ರ ಅನ್ವಯ ಭೂಮಾಪನ ಇಲಾಖೆಯ ಕಾರ್ಯನಿರ್ವಹಣೆಯನ್ನು ಕಂದಾಯ ಇಲಾಖೆಯಲ್ಲಿ ವಿಲೀನಗೊಳಿಸಲಾಗಿರುವ ಪ್ರಯುಕ್ತ, ಮೇಲ್ಕಂಡ ಭೂದಾಖಲೆಗಳ ಸಹಾಯಕ ನಿರ್ದೇಶಕರವರಿಗಿದ್ದ ಶಾಸನಬದ್ಧ ಅಧಿಕಾರವನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್‌ಡಿ 70 ಭೂದಾಸ 2005, ದಿನಾಂಕ 6.5.2005 ರ ಪ್ರಕಾರ ತಹಶೀಲ್ದಾರ್‌ರವರಿಗೆ ಪ್ರತ್ಯಾಯೋಜಿಸಲಾಗಿರುತ್ತದೆ.

7. **ಭೂದಾಖಲೆಗಳ ಸಹಾಯಕ ನಿರ್ದೇಶಕರು, ನಗರಮಾಪನ:–**

- ಕರ್ನಾಟಕ ಭೂಕಂದಾಯ ನಿಯಮಾವಳಿ 1966 ರ ನಿಯಮ 36(1) (ಮೋಜಣಿ ತಪ್ಪಿನ ಪ್ರಕರಣಗಳ ಬಗ್ಗೆ ತಿದ್ದುಪಡಿ ಆದೇಶ) 90 (ಹಕ್ಕು ದಾಖಲೆ ದೃಢೀಕರಿಸುವುದು) 139 (1) (ಮೊದಲನೇ ಹದ್ದುಬಸ್ತು ಮೇಲ್ಮನವಿ) ಈ ಶಾಸನಬದ್ಧ ಅಧಿಕಾರಗಳನ್ನು ಚಲಾಯಿಸುವ ಅಧಿಕಾರವಿರುತ್ತದೆ.

## ಮಾಹಿತಿ ಹಕ್ಕು ಅಧಿನಿಯಮ 4 (1) (b) (iii) ಮತ್ತು (iv)
## ಮೇಲ್ವಿಚಾರಣೆಯಲ್ಲಿ ಅನುಸರಿಸುವ ಕ್ರಮಗಳು ಮತ್ತು ಕಾರ್ಯನಿರ್ವಹಣೆ ರೂಪಿಸುವ ಸೂತ್ರಗಳು

**ತಹಶೀಲ್ದಾರ್ ರವರ ಕಛೇರಿಯಿಂದ ದಾಖಲೆಗಳನ್ನು ಪಡೆಯಲು ಸಾರ್ವಜನಿಕರು ಅನುಸರಿಸಬೇಕಾದ ಕ್ರಮಗಳು:–**

ತಾಲ್ಲೂಕು ತಹಶೀಲ್ದಾರ್ ರವರನ್ನು ವಿಳಾಸಿಸಿ ಅರ್ಜಿಯನ್ನು ತಯಾರಿಸಬೇಕು. ಅರ್ಜಿಯಲ್ಲಿ ತಾಲ್ಲೂಕು, ಹೋಬಳಿ, ಗ್ರಾಮ ಹಾಗೂ ಸರ್ವೆ ನಂಬರುಗಳನ್ನು ನಮೂದಿಸಿ, ಯಾವ ಯಾವ ದಾಖಲೆಗಳು ಅಗತ್ಯ ಎಂಬುದನ್ನೂ ಸಹ ನಮೂದಿಸಿ, ಅರ್ಜಿದಾರರು ಅರ್ಜಿಯಲ್ಲಿ ಸಹಿ ಮಾಡಿ ವಿಳಾಸವನ್ನು ಬರೆದು, ತಹಶೀಲ್ದಾರ್ ಕಛೇರಿಯ ಭೂಮಾಪನ ಶಾಖೆಯ ಮುಖ್ಯಸ್ಥರನ್ನು ಸಂಪರ್ಕಿಸಿ, ನಿಗಧಿಪಡಿಸಬಹುದಾದ ಶುಲ್ಕವನ್ನು ಪಾವತಿ ಮಾಡಿ ರಸೀದಿಯನ್ನು ಅರ್ಜಿಯೊಂದಿಗೆ ನೀಡಿದಲ್ಲಿ, ನಿಗಧಿಪಡಿಸಿದ ಅವಧಿಯ ನಂತರ ಅಪೇಕ್ಷಿತ ದಾಖಲೆಗಳ ದೃಢೀಕೃತ ನಕಲುಗಳನ್ನು ಪಡೆಯಬಹುದು. ಲಭ್ಯವಿಲ್ಲದ ಹಾಗೂ ಶಿಥಿಲವಾದ ದಾಖಲೆಗಳ ಬಗ್ಗೆ ಹಿಂಬರಹವನ್ನು ಪಡೆಯಬಹುದು.

**ದರಖಾಸ್ತು ಅಥವಾ ಭೂಮಂಜೂರಾತಿ ಕಡತಗಳ ಬಗ್ಗೆ ಅಳತೆ ಮಾಡುವ ಕ್ರಮ:–**

ಈ ಪ್ರಕರಣಗಳ ಬಗ್ಗೆ ಅಳತೆ ಮಾಡಲು ದರಖಾಸ್ತುದಾರನು ಪ್ರತ್ಯೇಕವಾಗಿ ಅರ್ಜಿ ಸಲ್ಲಿಸಬೇಕಾಗಿಲ್ಲ. ದರಖಾಸ್ತುದಾರನಿಗೆ ಕಂದಾಯ ಇಲಾಖೆಯಿಂದ ಜಮೀನು ಮಂಜೂರಾದ ನಂತರ, ಸಾಗುವಳಿ ಚೀಟಿ ಹಾಗೂ ಮಂಜೂರಿ ಆದೇಶವನ್ನು ಪಡೆದ ರೈತನು ಈ ಬಗ್ಗೆ ಸಂಪೂರ್ಣ ಕೆಲಸ ಮುಗಿಯಿತೆಂದು ಭಾವಿಸುವುದು ತಪ್ಪು. ಮಂಜೂರಾದ ಬಾಬ್ತು ಜಮೀನನ್ನು ಅಳತೆ ಮಾಡಿ ಹೊಸ ಸರ್ವೆ ನಂಬರ್ ಕೊಟ್ಟು ಸರ್ವೆ ದಾಖಲೆಗಳಲ್ಲಿ ದುರಸ್ತಾಗಿ ನಂತರ ಪಹಣಿ (ಆರ್.ಟಿ.ಸಿ) ಯಲ್ಲಿ ದಾಖಲಾಗುವವರೆಗೂ ಸಂಪೂರ್ಣ ಕೆಲಸ ಮುಗಿದಿಲ್ಲವೆಂದು ತಿಳಿಯಬೇಕು.

ಜಮೀನು ಮಂಜೂರಾದ ನಂತರ, ಮಂಜೂರಿಗೆ ಸಂಬಂಧಪಟ್ಟ ಸಾಗುವಳಿ ಚೀಟಿ, ಮಂಜೂರಿ ಆದೇಶ ಮತ್ತು ರೆವಿನ್ಯೂ ನಕ್ಷೆಯೊಂದಿಗೆ ಕಡತವು ಭೂಮಾಪನ ಶಾಖೆಗೆ ಬಂದ ನಂತರ, ಭೂಮಾಪಕರು ಮಂಜೂರಿದಾರರಿಗೆ ಮುಂಚಿತವಾಗಿ ನೋಟೀಸ್ ಕೊಟ್ಟು ಅಳತೆ ಮಾಡಲು ಸ್ಥಳಕ್ಕೆ ಬರುತ್ತಾರೆ. ಸ್ಥಳದಲ್ಲಿ ಭೂಮಾಪಕರು ಮಂಜೂರಾದ ಸರ್ವೆ ನಂಬರಿನಲ್ಲಿಯೇ ಅನುಭವವಿದೆಯೇ ? ರೆವಿನ್ಯೂ ನಕ್ಷೆಯಂತೆ ಅನುಭವವಿದೆಯೇ ? ಎಂಬುದನ್ನು ಅಳತೆಯಿಂದ ಪರಿಶೀಲಿಸಿಕೊಂಡು ಸರ್ವೆ ನಂಬರಿನ ಗಡಿ ರೇಖೆಯನ್ನು ಖಾಯಂ ಇಟ್ಟುಕೊಂಡು, ಗಡಿ ರೇಖೆಯಿಂದ ಮಂಜೂರಿ ಪ್ರದೇಶಕ್ಕೆ ಸಂಪರ್ಕ ಅಳತೆ ನೀಡಿ ಮಂಜೂರಿ ಪ್ರದೇಶವನ್ನು ಅಳತೆ ಮಾಡಿ ಅದರಂತೆ ಹೇಳಿಕೆಯನ್ನು ಪಡೆದು, ಪೋಡಿ ಸ್ಕೆಚ್, ಪೋಡಿ ತ:ಖ್ತೆ, ಟಿಪ್ಪಣಿ, ಗುಣಾಕಾರ ಪುಸ್ತಕ ಇವುಗಳನ್ನು ತಯಾರು ಮಾಡಿ ಕಛೇರಿಗೆ ನೀಡುತ್ತಾರೆ. ಕಛೇರಿಯಲ್ಲಿ ಮೂಲ ಸರ್ವೆ ದಾಖಲೆಗಳೊಂದಿಗೆ ಪರಿಶೀಲನೆ ಮಾಡಿ ಗ್ರಾಮ ನಕಾಶೆಯಲ್ಲಿ ಪ್ಲಾಟ್ ಮಾಡಿ ಹೊಸ ಸರ್ವೆ ನಂಬರ್ ನೀಡಿ ಕೆ.ಡಿ.ಟಿ. ಆಕಾರ್‌ಬಂದ್ 3 ಪ್ರತಿಗಳನ್ನು ತಯಾರು ಮಾಡಿ ತಪಾಸಕರಿಗೆ ಕಳುಹಿಸಿರುತ್ತಾರೆ. ತಪಾಸಕರ ಪರಿಶೀಲನೆಯಾದ ನಂತರ ತಹಶೀಲ್ದಾರ್ ರವರು ಪರಿಶೀಲಿಸಿ ದೃಢೀಕರಿಸುತ್ತಾರೆ. ನಂತರ ಟಿಪ್ಪಣಿ, ಪಕ್ಕಾ, ನೋಟೀಸ್, ಹೇಳಿಕೆ, ಕೆ.ಡಿ.ಟಿ. ಆಕಾರಬಂದ್‌ನ ಒಂದು ಪ್ರತಿ, ಮೂಲ ಸರ್ವೆ ದಾಖಲೆಗಳಲ್ಲಿ ಅಳವಡಿಸಿಕೊಂಡು ಪೋಡಿ ತ;ಖ್ತೆ, ಪೋಡಿ ಸ್ಕೆಚ್ ಮತ್ತು 2 ಆಕಾರಬಂದ್ ಪ್ರತಿಗಳನ್ನು ಕಂದಾಯ ಇಲಾಖೆಯ ಶಾಖೆಗೆ ಕಳುಹಿಸಿದ ನಂತರ ಆರ್.ಟಿ.ಸಿ.ಯಲ್ಲಿ ದುರಸ್ತಿಪಡಿಸಿರುತ್ತಾರೆ. ಅರ್ಜಿದಾರನು ಮಂಜೂರಾದ ಬಾಬ್ತು ಹೊಸ ಸರ್ವೆನಂಬರಿನ ಟಿಪ್ಪಣಿ, ಆಕಾರಬಂದ್, ಗ್ರಾಮ ನಕಾಶೆ,ಆರ್.ಟಿ.ಸಿ. ಇವುಗಳ ದಾಖಲೆಗಳನ್ನು ಪಡೆಯಬಹುದು. ಇಲ್ಲಿಗೆ ಮಂಜೂರಿ ಬಾಬ್ತು ಸಂಪೂರ್ಣ ಕೆಲಸ ಪೂರೈಸಿದಂತಾಗುತ್ತದೆ.

ಈ ಪ್ರಕರಣದಲ್ಲಿ ಹೊಸ ಸರ್ವೆ ನಂಬರ್ ನೀಡುವುದು, ಕಂದಾಯ ನಿಗಧಿಪಡಿಸುವುದು, ಬಿ ಖರಾಬ್‌ನಲ್ಲಿ ಮಂಜೂರಿ ಪ್ರದೇಶವನ್ನು ಕಳೆಯುವುದು, ಸಾಗುವಳಿ ವಿಸ್ತೀರ್ಣವನ್ನು ಹೆಚ್ಚಿಸುವುದು ಮಂಜೂರಿದಾರನ ಹೆಸರನ್ನು ಹಕ್ಕು ದಾಖಲೆಯಲ್ಲಿ ದಾಖಲಿಸುವುದು ಇವು ಮುಖ್ಯ ಅಂಶಗಳಾಗಿರುತ್ತದೆ.

**ಭೂ ಪರಿವರ್ತನೆ ಅಥವಾ ಅಲಿನೇಷನ್ ಪ್ರಕರಣದ ಬಗ್ಗೆ ಕ್ರಮ:–**

ವ್ಯವಸಾಯದ ಜಮೀನನ್ನು ವ್ಯವಸಾಯೇತರ (ಇತರೆ ಉದ್ದೇಶ) ಉದ್ದೇಶಗಳಿಗೆ ಉಪಯೋಗಿಸಲು ಮಾಡುವ ಮಾರ್ಪಾಡಿಗೆ ಭೂಪರಿವರ್ತನೆ ಎಂದು ಕರೆಯುವರು. ಒಬ್ಬ ಹಿಡುವಳಿದಾರನು ತನ್ನ ಹಕ್ಕಿಗೆ ಸಂಬಂಧಪಟ್ಟ ವ್ಯವಸಾಯದ ಜಮೀನನ್ನು ವ್ಯವಸಾಯೇತರ ಜಮೀನನ್ನಾಗಿ ಮಾರ್ಪಡಿಸಲು ಅಥವಾ ನಿವೇಶನಗಳನ್ನಾಗಿ ವಿಂಗಡಿಸಿ ವಾಸ್ತವ್ಯದ ಜಮೀನನ್ನಾಗಿ ಉಪಯೋಗಿಸುವ ಉದ್ದೇಶದಿಂದ ಕಂದಾಯ ಇಲಾಖೆಗೆ ನಿಗಧಿಪಡಿಸಿದ ನಮೂನೆಯಲ್ಲಿ ದಾಖಲೆಗಳೊಂದಿಗೆ ಅರ್ಜಿ ಸಲ್ಲಿಸಬಹುದು. ಅರ್ಜಿದಾರನ ಕೋರಿಕೆಯಂತೆ ಭೂಪರಿವರ್ತನೆಯ ಆದೇಶವಾದ ನಂತರ ಈ ಪ್ರಕರಣವು ಭೂಮಾಪನ ಶಾಖೆಗೆ ರವಾನಿತವಾಗುತ್ತದೆ. ಭೂಮಾಪಕರು ಸಂಬಂಧಪಟ್ಟ ಅರ್ಜಿದಾರರಿಗೆ ನೋಟೀಸ್ ನೀಡಿ, ಭೂಪರಿವರ್ತನೆಯಾದ ಪ್ರದೇಶವನ್ನು ಗುರುತಿಸಿ, ಅಳತೆ ಮಾಡಿ,ಭೂಪರಿವರ್ತನೆಯಾದ ಪ್ರದೇಶವು ಪೈಕಿ ವಿಸ್ತೀರ್ಣವಾಗಿದ್ದಲ್ಲಿ, ಸಬ್ ನಂಬರ್ ನೀಡಿ ಟಿಪ್ಪಣಿ ಮತ್ತು ಪಕ್ಕಾ ಬುಕ್ಕನ್ನು ತಯಾರು ಮಾಡಿ ಕಛೇರಿಗೆ ನೀಡುತ್ತಾರೆ. ಕಛೇರಿಯಲ್ಲಿ ಪರಿಶೀಲಿಸಿ, ಫಾರಂ–10, ಅಟ್ಲಾಸ್‌ನ 3 ಪ್ರತಿಗಳು ಮತ್ತು ಆಕಾರಬಂದ್‌ನ 3 ಪ್ರತಿಗಳನ್ನು ತಯಾರು ಮಾಡಲಾಗುತ್ತದೆ. ಪರ್ಯಾವೇಕ್ಷಕರ ಪರಿಶೀಲನೆಯಾದ ನಂತರ ತಹಶೀಲ್ದಾರ್‌ರವರು ದೃಢೀಕರಿಸಿದ ನಂತರ ಸರ್ವೆ ದಾಖಲೆಗಳಲ್ಲಿ ಅಳವಡಿಸಿಕೊಂಡು, ಫಾರಂ–10, 2 ಪ್ರತಿ, ಅಟ್ಲಾಸ್ ಮತ್ತು 2 ಪ್ರತಿ ಆಕಾರಬಂದ್‌ಗಳನ್ನು ಆರ್.ಟಿ.ಸಿ. ದಾಖಲೆಯಲ್ಲಿ ದುರಸ್ತುಪಡಿಸುವ ಬಗ್ಗೆ ಕಂದಾಯ ಇಲಾಖೆಗೆ ಕಳುಹಿಸಲಾಗುವುದು.

ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ, ಭೂಪರಿವರ್ತನೆಯಾದ ಪ್ರದೇಶವನ್ನು ಎ ಖರಾಬಿಗೆ ಸೇರಿಸುವುದು, ಸಾಗುವಳಿ ಜಮೀನಿಂದ ಕಳೆದು ಆಕಾರ ಕಡಿಮೆ ಮಾಡುವುದು.

ಮೇಲ್ಕಂಡ ಕ್ರಮದಂತೆ, ಭೂಪರಿವರ್ತನೆಯಾದ ಜಮೀನಿನಲ್ಲಿ ಮಾತ್ರ ನಿವೇಶನಗಳನ್ನಾಗಿ ವಿಂಗಡಿಸಿ, ಸಕ್ಷಮ ಪ್ರಾಧಿಕಾರದಿಂದ ನಕ್ಷೆ ಅನುಮೋದನೆಯಾದ ನಂತರವೇ ನಿವೇಶನಗಳನ್ನು ಮಾರಾಟ ಮಾಡಬಹುದು. ಭೂಪರಿವರ್ತನೆ ಯಾಗದ ಜಮೀನಿನಲ್ಲಿ ನಿವೇಶನಗಳನ್ನು ವಿಂಗಡಿಸುವುದು, ಕಾನೂನು ಬಾಹಿರವಾದುದು. ವ್ಯವಸಾಯದ ಜಮೀನಿನಲ್ಲಿ ಭೂಪರಿವರ್ತನೆಯ ಆದೇಶ ಪಡೆಯದೆ ವಿಂಗಡಿಸಿದ ನಿವೇಶನಗಳು ರೆವಿನ್ಯೂ ನಿವೇಶನಗಳಾಗುತ್ತದೆ. ಈ ನಿವೇಶನದಲ್ಲಿ ಕಟ್ಟಲ್ಪಟ್ಟ ಮನೆಗಳು ಅನಧಿಕೃತ ಕಟ್ಟಡಗಳಾಗುತ್ತದೆ. ಸಾರ್ವಜನಿಕರು ಈ ಅಂಶವನ್ನು ಮುಖ್ಯವಾಗಿ ಗಮನಿಸಬೇಕಾಗುತ್ತದೆ.

**ಭೂಸ್ವಾಧೀನ ಪ್ರಕರಣಗಳ ಬಗ್ಗೆ ಕ್ರಮ:–**

ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಕೈಗಾರಿಕೆ ರಸ್ತೆ, ಕಾಲುವೆ ಗ್ರಾಮದ ಬಡಾವಣೆ, ಕೆರೆ ಇತ್ಯಾದಿ ಉದ್ದೇಶಗಳಿಗೆ ಜಮೀನು ಅವಶ್ಯಕವೆನಿಸಿದಾಗ ಸರ್ಕಾರವು ಸಂಬಂಧಪಟ್ಟ ಹಿಡುವಳಿದಾರರಿಂದ ಭೂಸ್ವಾಧೀನ ಅಧಿನಿಯಮ 1894 ರ ಪ್ರಕಾರ ಸ್ವಾಧೀನಪಡಿಸಿಕೊಳ್ಳಲು ನಡೆಸಲ್ಪಡುವ ನಡವಳಿಕೆಗಳಿಗೆ ಭೂಸ್ವಾಧೀನ ಪ್ರಕರಣವೆಂದು ಹೆಸರು.

ರೆವಿನ್ಯೂ ಮತ್ತು ಭೂಸ್ವಾಧೀನ ಇಲಾಖೆಯಿಂದ ಪ್ರಾರಂಭ ಮತ್ತು ಅಂತಿಮ ಅಧಿಸೂಚನೆಯಾದ ನಂತರ ನಕ್ಷೆಯೊಂದಿಗೆ ನೋಟಿಫಿಕೇಷನ್ ಭೂಮಾಪನ ಇಲಾಖೆಗೆ ರವಾನಿಸಲ್ಪಟ್ಟ ನಂತರ ಆ ಸಂಬಂಧ ಈಗಾಗಲೇ ತಯಾರಿಸಿದ್ದ (ಜಂಟಿ ಅಳತೆ ಸಮಯದಲ್ಲಿ) ಪಕ್ಕಾ ಟಿಪ್ಪಣಿ ಆಧಾರದ ಮೇಲೆ ದುರಸ್ತಿಪಡಿಸಲಾಗುವುದು. ಈ ಪ್ರಕರಣಗಳಲ್ಲೂ ಸಹ ಪಕ್ಕಾ, ಟಿಪ್ಪಣಿ, ಅಟ್ಲಾಸ್, ಆಕಾರಬಂದ್‌ಗಳನ್ನು ಸರ್ವೆ ದಾಖಲೆಗಳಲ್ಲಿ ಅಳವಡಿಸಿಕೊಂಡು, 2 ಪ್ರತಿ ಆಕಾರ್‌ಬಂದ್, 2 ಪ್ರತಿ ಅಟ್ಲಾಸ್, ಫಾರಂ ನಂ–10 ಇವುಗಳನ್ನು ಆರ್.ಟಿ.ಸಿ.ಯಲ್ಲಿ ದುರಸ್ತಿಪಡಿಸಿಕೊಳ್ಳಲು ಕಂದಾಯ ಇಲಾಖೆಗೆ ಕಳುಹಿಸಲಾಗುವುದು.

ಈ ಪ್ರಕರಣದಲ್ಲಿ ಭೂಸ್ವಾಧೀನವಾದ ಬಾಬ್ತು ಪ್ರದೇಶವನ್ನು ಎ ಖರಾಬಿನಲ್ಲಿ ತಂದು ಸಾಗುವಳಿ ಜಮೀನಿನಲ್ಲಿ ಮತ್ತು ಆಕಾರದಲ್ಲಿ ಕಡಿಮೆ ಮಾಡಲಾಗುವುದು.

**ಮ್ಯುಟೇಶನ್ ಪ್ರಕರಣಗಳ ಬಗ್ಗೆ ಕ್ರಮ:–**

ಈ ಪ್ರಕರಣಗಳ ಬಾಬ್ತಿ ಅಳತೆ ಕ್ರಮದಲ್ಲಿ ಸ್ವಲ್ಪ ಬದಲಾವಣೆಯಾಗಿರುತ್ತದೆ. ಭೂವಿವಾದ ರಹಿತ ಸಮಾಜವನ್ನು ಸೃಷ್ಟಿ ಮಾಡುವ ಹಾದಿಯಲ್ಲಿ ಈ ಬದಲಾವಣೆ ಅತ್ಯಂತ ಮಹತ್ವ ಪೂರ್ಣವಾಗಿದೆ.

ಹಿಡುವಳಿ ನಂಬರುಗಳಲ್ಲಿ ವ್ಯಕ್ತಿ ಸಂಬಂಧವಾಗಿ ಇರತಕ್ಕ ಹಕ್ಕುಗಳಲ್ಲಿ, ಕ್ರಯ, ವಿಭಾಗ, ಪಾಲು ವಿಂಗಡಣೆ ಇತ್ಯಾದಿಗಳಿಂದ ಉಂಟಾದ ಬದಲಾವಣೆಗಳನ್ನು ಸರ್ವೆ ದಾಖಲೆಗಳಲ್ಲಿ ಹಾಗೂ ಹಕ್ಕು ದಾಖಲೆಗಳಲ್ಲಿ ಅಂತಿಮವಾಗಿ ದುರಸ್ತಿಪಡಿಸಿಕೊಳ್ಳಲು ಬರತಕ್ಕ ಪ್ರಕರಣಗಳಿಗೆ ಮ್ಯುಟೇಶನ್ ಪ್ರಕರಣಗಳೆಂದು ಕರೆಯಲಾಗುವುದು.

ಜಮೀನು ಮಾರಾಟ ಮಾಡುವ ವ್ಯಕ್ತಿಯು, ಮಾರಾಟ ಮಾಡುವಂತ ಜಮೀನನ್ನು ನೋಂದಣಿ ಇಲಾಖೆಯಲ್ಲಿ ನೋಂದಣಿ ಮಾಡುವ ಪೂರ್ವದಲ್ಲಿಯೇ ಆ ಬಾಬ್ತು ನಕ್ಷೆಯನ್ನು ಕಡ್ಡಾಯವಾಗಿ ತಯಾರಿಸಿಸಿ ದಸ್ತಾವೇಜಿನೊಂದಿಗೆ ನೊಂದಣಿಗಾಗಿ ಸಲ್ಲಿಸಬೇಕು.

ಉದ್ದೇಶಿತ ಜಮೀನನ್ನು ಕ್ರಮ ಮಾಡುವ ಮೊದಲು ತಹಶೀಲ್ದಾರ್ ಕಛೇರಿಯನ್ನು ಸಂಪರ್ಕಿಸಿ, ಈ ಬಗ್ಗೆ ಅರ್ಜಿಯನ್ನು ಪಡೆದು ನಿಗಧಿಪಡಿಸಿದ ಶುಲ್ಕವನ್ನು ಪಾವತಿ ಮಾಡಿ ಪರವಾನಗಿ ಭೂಮಾಪಕರಿಂದ ನಕ್ಷೆಯನ್ನು ತಯಾರಿಸಬೇಕು. ಪರವಾನಗಿ ಭೂಮಾಪಕರಿಂದ ತಯಾರಿಸಲ್ಪಟ್ಟ ನಕ್ಷೆಯು ಪರ್ಯಾವೇಕ್ಷಕರಿಂದ ಪರಿಶೀಲನೆಯಾದ ನಂತರ ತಹಶೀಲ್ದಾರ್‌ರವರು ದೃಢೀಕರಿಸುತ್ತಾರೆ. ಈ ರೀತಿ ದೃಢೀಕರಣಗೊಂಡ ನಕ್ಷೆಯನ್ನು ದಸ್ತಾವೇಜಿನೊಂದಿಗೆ ನೋಂದಣಿ ಇಲಾಖೆಗೆ ಸಲ್ಲಿಸಿ ನೋಂದಣಿಯನ್ನು ಮಾಡಿಸಬೇಕು. ನಂತರ ಸರ್ವೆ ದಾಖಲೆಗಳಲ್ಲಿ ಅಂತಿಮವಾಗಿ ಆರ್.ಟಿ.ಸಿ.ಯಲ್ಲಿ ದುರಸ್ತಾಗುತ್ತದೆ.

**ಹದ್ದುಬಸ್ತು ಕಡತಗಳ ಅಳತೆ ಬಗ್ಗೆ ಕ್ರಮ:–**

ಹದ್ದುಬಸ್ತು ಕಡತಗಳು ಅಂದರೆ, ಸರ್ವೆ ನಂಬರಿನ ಗಡಿಯನ್ನು ತೋರಿಸುವಂತೆ ಕೋರಿರುವ ಅರ್ಜಿಗಳು. ಈ ಬಗ್ಗೆ ತಹಶೀಲ್ದಾರ್‌ರವರಿಗೆ ಸರ್ವೆ ನಂಬರಿನ ಹಕ್ಕುದಾರರು ಅರ್ಜಿಯನ್ನು ಸಲ್ಲಿಸಬಹುದು. ಸರ್ವೆ ನಂಬರಿನ ಕಲ್ಲುಗಳು ನಾಶವಾಗಿದ್ದಲ್ಲಿಅಥವಾ ಪಕ್ಕದ ಹಿಡುವಳಿದಾರರು ಒತ್ತುವರಿ ಮಾಡಿರುವುದಾಗಿ ಅನುಮಾನ ಬಂದಲ್ಲಿ ಬಾಧಿತ ಹಕ್ಕುದಾರನು ಹದ್ದುಬಸ್ತು ಮಾಡಬೇಕಾದ ಉದ್ದೇಶಿತ ಸರ್ವೆ ನಂಬರಿನ ಇತ್ತೀಚಿನ ಪಹಣಿ (ಆರ್.ಟಿ.ಸಿ) ದಾಖಲೆಯೊಂದಿಗೆ ತಹಶೀಲ್ದಾರ್‌ರವರನ್ನು ವಿಳಾಸಿಸಿ ತಾಲ್ಲೂಕು ಹಾಗೂ ಸರ್ವೆ ನಂಬರಿನ ವಿವರ ಮತ್ತು ಬಾಜುದಾರರ ವಿಳಾಸ, ಅರ್ಜಿದಾರನ ವಿಳಾಸ ಮತ್ತು ಸಹಿ ಇವುಗಲನ್ನು ಒಳಗೊಂಡಿರುತ್ತದೆ. ಅಳತೆ ಶುಲ್ಕ ಹಾಗೂ ಪ್ರೋಸೆಸ್ ಶುಲ್ಕ ಪಾವತಿಸಿದ ಬಗ್ಗೆ ರಸೀದಿಯನ್ನು ಲಗತ್ತಿಸಿ ಅರ್ಜಿಯನ್ನು ಸಲ್ಲಿಸಬೇಕು.

ನಂತರ ಸದರಿ ಅರ್ಜಿಯನ್ನು ಭೂಮಾಪಕರಿಗೆ ರವಾನಿಸಲಾಗುವುದು. ಭೂಮಾಪಕರು ಅರ್ಜಿದಾರರಿಗೆ ಹಾಗೂ ಬಾಜುದಾರರಿಗೆ ಮುಂಚಿತವಾಗಿ ನೋಟೀಸ್ ಕೊಟ್ಟು ಅಳತೆ ಮಾಡಿ ಗಡಿ ಗುರುತುಗಳನ್ನು ಈಗಾಗಲೇ ತಯಾರಿಸಿರುವ ಟಿಪ್ಪಣಿ ಆಧಾರದ ಮೇಲೆ ತೋರಿಸುವರು. ಅರ್ಜಿದಾರನು ಕಲ್ಲುಗಳನ್ನು ಹಾಕಿಕೊಳ್ಳಬೇಕು. ಈ ಬಗ್ಗೆ ಹೇಳಿಕೆ ಪಡೆದು ನಕ್ಷೆ ತಯಾರಿಸಿ, ಒತ್ತುವರಿ ಇದ್ದಲ್ಲಿ ಒತ್ತುವರಿ ಇದೆ ಎಂದು ಒತ್ತುವರಿ ಅಳತೆ ಮತ್ತು ವಿಸ್ತೀರ್ಣವನ್ನು ನಕ್ಷೆಯಲ್ಲಿ ತೋರಿಸಿ ಕಛೇರಿಗೆ ವಾಪಸ್ಸು ಮಾಡುವರು.

ಈ ಅಳತೆ ಬಾಬ್ತು ನೋಟೀಸ್ ಪ್ರತಿ, ಹೇಳಿಕೆ ಪ್ರತಿ, ನಕ್ಷೆ ಪ್ರತಿಗಳನ್ನು ಬಾಜೂರಾರಾಗಲೀ ಅಥವಾ ಅರ್ಜಿದಾರರಾಗಲೀ ಪ್ರತ್ಯೇಕ ಅರ್ಜಿಯನ್ನು ಸಲ್ಲಿಸಿ,ಶುಲ್ಕ ಪಾವತಿ ಮಾಡಿ ಪಡೆಯಬಹುದು.

ಈ ಅಳತೆಯಿಂದ ಬಾಧಿತ ಅಥವಾ ನೊಂದ ಅರ್ಜಿದಾರರಾಗಲೀ ಅಥವಾ ಬಾಜೂದಾರರಾಗಲೀ ಕರ್ನಾಟಕ ಭೂಕಂದಾಯ ನಿಯಮಾವಳಿ 139(1) ರ ಮೇರೆಗೆ ತಹಶೀಲ್ದಾರ್‌ರವರಿಗೆ 1ನೇ ಮೇಲ್ಮನವಿಯನ್ನು ಸಲ್ಲಿಸಬಹುದು. 1ನೇ ಮೇಲ್ಮನವಿಯನ್ನು ಸಲ್ಲಿಸುವಾಗಲೂ ಸಹ ಪಹಣಿ, ಭೂಮಾಪಕರು ತಯಾರ ಮಾಡಿದ ಹದ್ದುಬಸ್ತು ನಕ್ಷೆಯ ಪ್ರತಿಯನ್ನು ಕಡ್ಡಾಯವಾಗಿ ಸಲ್ಲಿಸಬೇಕು. 1ನೇ ಮೇಲ್ಮನವಿ ಅರ್ಜಿಯ ಪ್ರಕಾರ ತಹಶೀಲ್ದಾರ್‌ರವರೇಗಡಿಯನ್ನು ಅಳತೆ ಮಾಡಿ, ಗಡಿ ಗುರುತುಗಳನ್ನು ತೋರಿಸಿ ನಕ್ಷೆಯನ್ನು ತಯಾರಿಸುತ್ತಾರೆ ಮತ್ತು ಮೇಲ್ಮನವಿ ಆದೇಶವನ್ನು ಹೊರಡಿಸುತ್ತಾರೆ. ಈ ಮೇಲ್ಮನವಿಯಲ್ಲಿ ಭೂಮಾಪಕರು ತಯಾರಿಸಿದ್ದ ನಕ್ಷೆಯನ್ನು ಸರಿಯಾಗಿದೆ ಎಂದು ಪುರಸ್ಕರಿಸಬಹುದು ಇಲ್ಲವೇ ರದ್ದುಗೊಳಿಸಬಹುದು. ಈ ಮೇಲ್ಮನವಿ ಬಾಬ್ತು ನಕ್ಷೆ ಮತ್ತು ಆದೇಶದ ಪ್ರತಿಗಳನ್ನು ಪ್ರತ್ಯೇಕ ಅರ್ಜಿಯನ್ನು ಸಲ್ಲಿಸಿ ಪಡೆಯಬಹುದು.

ತಹಶೀಲ್ದಾರ್‌ರವರ ಆದೇಶದಿಂದ ಬಾದಿತನಾದ ಅರ್ಜಿದಾರನಾಗಲೀ ಅಥವಾ ಬಾಜೂದಾರನಾಗಲೀ 2ನೇ ಹದ್ದುಬಸ್ತು ಮೇಲ್ಮನವಿಯನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿನ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರಿಗೆ ಸಲ್ಲಿಸಲು ಅವಕಾಶವಿದೆ. 2ನೇ ಮೇಲ್ಮನವಿಯೇ ಅಂತಿಮವಾದುದು.

